ಸಂಪಾದಕರು :
ಎಂ. ಹರಿದಾಸರಾವ್

★

ಪ್ರಕಾಶಕರು :
ಎಂ. ಎಚ್. ರಾವ್
ಸರ್ವೋದಯ ಸಾಹಿತ್ಯ ಮಾಲೆ,
ಹುಬ್ಬಳ್ಳಿ

★

ಮುದ್ರಕರು :
ಎಸ್. ವ್ಹಿ. ಶ್ರೀಷಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹುಬ್ಬಳ್ಳಿ

ಮೊದಲನೆಯ ಆವೃತ್ತಿ
೧೫, ಆಗಸ್ಟ್, ೧೯೫೦

ಬೆಲೆ : ೧—೮—೦

# ಪ್ರಕಾಶಕರ ಮಾತು

ಸರ್ವೋದಯ ಸಾಹಿತ್ಯಮಾಲೆಯು ಈಗ ಮೂರನೇ ವರುಷಕ್ಕೆ ಕಾಲಿಟ್ಟಿದೆ. ೧೯೪೮ನೇ ಆಗಸ್ಟ್ ೧೫ನೇ ತಾರೀಖಿನ ಶುಭ ದಿನ ಆರಂಭವಾದ ಈ ಗ್ರಂಥಮಾಲೆಯಲ್ಲಿ ಮೊದಲನೇ ವರುಷ ಮೂರು ತಿಂಗಳಿಗೊಂದರಂತೆ ೧) ಕ್ರಿಸ್ಮಸ್ ಕಾಣಿಕೆ, ಮತ್ತು ಇತರ ಕಥೆಗಳು ೨) ಬದುಕಿನ ದಾರಿ (ಕಾದಂಬರಿ) ೩) ಮರುಭೂಮಿಯ ಅರಬರು (ರಾಜಕಾರಣ) ೪) ನಂದಾದೀಪದ ನಂದಿನಿ (ವಿಜಯಲಕ್ಷ್ಮಿ ಪಂಡಿತರ ಜೀವನ ಚರಿತ್ರೆ) ಈ ನಾಲ್ಕು ಪುಸ್ತಕಗಳನ್ನು ಸಕಾಲದಲ್ಲಿ ಕೊಟ್ಟೆವು. ಎರಡನೇ ವರುಷದಲ್ಲಿ ೧) ಅವರು ಯುದ್ಧಕ್ಕೆ ಹೋಗಲಿಲ್ಲ (ಕಥೆಗಳು) ೨) ಬಾಳಿನ ಗಿಡ (ಕಾದಂಬರಿ) ೩) ರಾಥಸ್ (ಕಲಾ ಸಂಕಲನ) ೪) ವಾಸನಾ (ನೀಳ್ಗತೆ) ಇವನ್ನು ಪ್ರಕಟಿಸಿದೆವು. "ಧಾರವಾಡದ ಹುಡುಗಿ" ಎಂಬ ಈ ಕಾದಂಬರಿ ಮೂರನೇ ವರುಷದ ಮೊದಲನೇ ಪುಷ್ಪವಾಗಿ ಅರಳಿದೆ.

ಈ ಮೂರನೇ ವರುಷದಲ್ಲಿ ಕೂಡಾ ಉತ್ತಮ ಗ್ರಂಥಗಳನ್ನು ಚಂದಾದಾರರಿಗೆ ಕೊಡಲು ನಮ್ಮ ಆಶೆ. ಅದರಂತೆಯೇ ಅಧಿಕ ಪುಟಗಳನ್ನು ಕೊಡಲು ಯತ್ನಿಸುವೆವು. ಆದರೆ ಜನರ ಸಹಾಯ ಸಹಕಾರವಿಲ್ಲದೆ ಈ ಆಶೆಗಳೆಲ್ಲ ಬರಿಗನಸುಗಳಾಗಬಹುದು. ಮಾಲೆಯು ಸ್ವಾವಲಂಬಿಯಾಗಿಲ್ಲ. ಮತ್ತು ಈ ಆರ್ಥಿಕ ಬಿಕ್ಕಟ್ಟಿನ ಹಾಗೂ ವಿಷಮ ವಾತಾವರಣದಲ್ಲಿ ಅದನ್ನು ನಡೆಸಿಕೊಂಡು ಬರುವುದು ಬಹಳ ದುಸ್ತರವಾಗಿದೆ. ಆದುದರಿಂದ ಕೈಲಾದವರು ಮಾಲೆಯ ಚಂದಾದಾರರಾಗಿ, ಪೋಷಕರಾಗಿ, ಹಿತಚಿಂತಕರಾಗಿ ಸಹಾಯ ಹಸ್ತವನ್ನು ನೀಡಬೇಕೆಂದು ಅರಿಕೆ. ಹಿಂದೆ ಚಂದಾದಾರರಾದವರು ನಡುವೆ ಬಿಡದೆ ತಾವು ಖಾಯಂ ಸದಸ್ಯರಾಗಬೇಕೆಂದೂ ತಮ್ಮ ಇಷ್ಟ ಮಿತ್ರರು ಹಾಗೂ ತಮ್ಮ ಊರಿನ ವಾಚನಾಲಯ, ಗ್ರಂಥಾಲಯ ಮೊದಲಾದ ಸಂಘ ಸಂಸ್ಥೆಗಳ ಸದಸ್ಯತ್ವಮಾಡಿ ನೆರವಾಗಬೇಕೆಂದೂ ಪ್ರಾರ್ಥನೆ.

**ಹುಬ್ಬಳ್ಳಿ**
೧೫, ಆಗಸ್ಟ್ ೧೯೫೦

ಪ್ರಕಾಶಕರು

## ಲೇಖಕನ ಅರಿಕೆ

ಈ "ಧಾರವಾಡದ ಹುಡುಗಿ" ಕಾದಂಬರಿ ಧಾರವಾಡದ ಯಾವ ಹುಡುಗಿಯನ್ನೂ ಉದ್ದೇಶಿಸಿ ಬರೆದುದಲ್ಲ. ಇದೊಂದು ಕಾಲ್ಪನಿಕ ಕಥೆ. ಕಾದಂಬರಿಯಲ್ಲಿ ರೂಪಿಸಿರುವ ಪಾತ್ರಗಳೆಲ್ಲ ಕೇವಲ ಕಾಲ್ಪನಿಕ ಸೃಷ್ಟಿ. ನೈಜ ಚಿತ್ರಣಕ್ಕಾಗಿ ಊರು, ಸ್ಥಳಗಳ ಹೆಸರುಗಳನ್ನಷ್ಟೇ ತೆಗೆದುಕೊಳ್ಳಲಾಗಿದೆ. ಪ್ರಾಜ್ಞರು ಈ ಕಾದಂಬರಿಯಲ್ಲಿರುವ ಲೋಪದೋಷಗಳನ್ನು ಮನ್ನಿಸಬೇಕೆಂದು ಅರಿಕೆ. ಅವಸರದ ಕಾರಣದಿಂದ ಉಳಿದುಕೊಂಡ ಕೆಲವು ಮುದ್ರಣ ದೋಷಗಳನ್ನೂ ವಾಚಕರು ಕಡೆಗಣಿಸುವರೆಂದು ನಂಬಿದ್ದೇನೆ.

ಈ ಕಾದಂಬರಿಗೆ ಅಂದವಾದ ಒಂದು ಮುಖ ಚಿತ್ರವನ್ನು ಬರೆದು ಕೊಟ್ಟ ಚಿತ್ರಕಾರ ಶ್ರೀ ಸದಾಶಿವ ( ಕಿರಣ ಪಬ್ಲಿಸಿಟಿ, ಹುಬ್ಬಳ್ಳಿ ) ಇವರಿಗೂ ಅಂತೆಯೇ ಅನೇಕ ಅವಸರದ ಕೆಲಸಗಳಿದ್ದರೂ ಬೇಗನೇ ಮುದ್ರಿಸಿ ಕೊಟ್ಟ ರಾಯಲ್ ಪ್ರಿಂಟಿಂಗ್ ಪ್ರೆಸ್ಸಿನ ಒಡೆಯರಿಗೂ ವಂದನೆಗಳು.

ಹುಬ್ಬಳ್ಳಿ
ಅಗಸ್ಟ ೧೯೫೦

ಎಂ. ಹರಿದಾಸರಾವ್

---

ಮುಂದಿನ ಪ್ರಕಟನೆ:--
**ಬ್ರಹ್ಮರಾಕ್ಷಸ** (ಸಾಮಾಜಿಕ ಕಾದಂಬರಿ)

# ಧಾರವಾಡದ ಹುಡುಗಿ

## ಒಂದನೆಯ ಅಧ್ಯಾಯ

ಧಾರವಾಡ ನಿವೃತ್ತ ಅಧಿಕಾರಿಗಳ ನಂದನವನ. ಕಾರವಾರದಿಂದ ವಿಜಾಪುರ, ಹರಿಹರದಿಂದ ಕೊಲ್ಲಾಪುರದ ವರೆಗಿನ ಅಧಿಕಾರಿಗಳು, "ಧಾರವಾಡ ! ಧಾರವಾಡ" ! ಎಂದು ಹಗಲಿರುಳು ಹಂಬಲಿಸುವರು. ನಿವೃತ್ತರಾದ ಮರುದಿನವೇ ಗಂಟು ಮೂಟೆ ಕಟ್ಟಿಕೊಂಡು ಧಾವಿಸುವರು. ಇದು ಇಂದು ನಿನ್ನೆಯಿಂದಲ್ಲ. ಕದಂಬ, ರಾಷ್ಟ್ರಕೂಟ, ಚಾಲುಕ್ಯ, ವಿಜಯ ನಗರ ರಾಜ್ಯ ಸಾಮ್ರಾಜ್ಯಗಳ ಕಾಲದಿಂದಲೂ ಹೀಗೆಯೇ ನಡೆದಿದೆಯಂತೆ! ಪುಣೆಯ ಪೇಶ್ವೆ ಮತ್ತು ಬ್ರಿಟಿಶರ ಆಳಿಕೆಗಳಲ್ಲಿ ಈ ಪ್ರವಾಹ ಸ್ವಲ್ಪ ಹೆಚ್ಚಾಗಿದೆ.

ಇದರ ಕಾರಣ ವಿಲಕ್ಷಣ. ಶಾಲ್ಮಲೆಯ ಉಗಮದ ಮೇಲೆ ನಿಂತ ಸೋಮೇಶ್ವರನ ಮಹಿಮೆಯಿಂದೆಂದು ಕೆಲವು ಹಿರಿಯರು ಆಡಿ ಕೊಳ್ಳುವುದುಂಟು. ಅಧಿಕಾರದಲ್ಲಿ ಹೊತ್ತ ಪಾಪದ ಹೊರೆ ಸೋಮೇಶ್ವರನ ದರ್ಶನದಿಂದ ಕರಗಿ ನೀರಾಗುವುದೆಂದು ಹಲವರ ನಂಬಿಗೆ. ಶಿಕ್ಷಣದ ಸೌಕರ್ಯವೂ ಈ ನಗರದಲ್ಲಿ ವಿಶೇಷ. ಇದು ಶಾಲೆ ಕಾಲೇಜುಗಳಿಂದ ತುಂಬಿದ ವಿದ್ಯಾರಣ್ಯ. ಅನೇಕ ಪೆನ್ಶನ್‌ದಾರರಿಗೆ ವೃದ್ಧಾಪ್ಯದ ಹುಚ್ಚಿನೊಂದಿಗೆ ನಿಸರ್ಗ ಸೌಂದರ್ಯದ ಪಿಡುಗೂ ಬೆರೆತಿರುತ್ತದೆ. ಮಲೆನಾಡಿನ ಸೆರಗಿನಂತಿರುವ ಈ ಊರಿನ ಸೊಬಗು ಅವರ ಮನಸ್ಸನ್ನು ಮೋಹಿಸುವುದು ಸಹಜವೇ.

ಹೀಗೆ ಧಾರವಾಡ ಬೆಳೆಯಿತು. ಮಾಳಮಡ್ಡಿಯಲ್ಲಿ ಮನೋಹರ ಮನೆಗಳು ಎದ್ದವು. ಗೋಪಾಳಪುರ ತಲೆಎತ್ತಿತು. ಸಾರಸ್ವತಪುರ ಇನ್ನೊಂದು. ನಗರದ ಸುತ್ತುಮುತ್ತಲಿನ ಗುಡ್ಡ ದಿನ್ನೆಗಳಿಗೂ ಕಲ್ಲು ಮಣ್ಣುಗಳನ್ನು ಹೊತ್ತರು. ಈ ದಿನ್ನೆಗಳ ಮಧ್ಯೆಇದ್ದ ಕಣಿವೆಗಳಲ್ಲಿ ಬಂಗಲೆಗಳು ಕಂಗೊಳಿಸಿದವು. ಎಲ್ಲಿ ನೋಡಿದರೂ ಸುಂದರ ಸೌಧಗಳೇ.

ಒಂದು ಇಟ್ಟಂಗಿಯ ಕಟ್ಟಡದ ಮನೆ. ಇನ್ನೊಂದು ಸಂಪೂರ್ಣ ಕಾಂಕ್ರೀಟ್. ಮಂಗಳೂರು ಹಂಚು ಹೊದೆಸಿದ ಮನೆಗಳು ಅನೇಕ. ಅಲ್ಲೊಂದು ಇಲ್ಲೊಂದು ಬೆಂಗಳೂರು ಮಾದರಿಯ ಬೋಳುಮನೆ. ಎಲ್ಲ, ತಂಪುಗಾಳಿಗೆ ಮೈಯೊಡ್ಡಿ ನಿಂತ ವಿರಾಮಗೃಹಗಳು ಬಣ್ಣಬಣ್ಣದ ಹೂವುಗಳಿಗೆ ಪರಿಮಳವಿದ್ದಂತೆ. ಈ ರೂಪವಾದ ಮನೆಗಳ ಹೆಸರುಗಳು ಕೂಡಾ ಚಂದ. ಶಾಂತಿ ಕುಟೀರ, ಆನಂದಾಶ್ರಮ, ಜಲಜ ನಿಲಯ, ಮೋಹಿನೀ ವಿಲಾಸ ಶಾರದಾ ಸದನ ಎಲ್ಲ ಸವಿಯಾದ ಸಾವಿರ ಹೆಸರುಗಳು.

ಇಂತಹ ಸಾವಿರಾರು ಬಂಗಲೆಗಳಲ್ಲಿ, 'ಸುಖಸಾಗರ" ಕೂಡಾ ಒಂದು. ಹೆಸರಿಗೆ ತಕ್ಕಂತೆ ಮನೆ ಅನುಕೂಲ ಸ್ಥಳದಲ್ಲಿದೆ. ಅಲ್ಲಿಂದ ರೇಲ್ವೆಸ್ಟೇಶ ನಿಗೂ ಹತ್ತಿರ. ಪೇಟೆಗೂ ಸಮೀಪ. ಇವುಗಳ ಮಧ್ಯೆಇರುವ ಮಾಳಮಡ್ಡಿ ಯಲ್ಲಿ ಈ ಬಂಗಲೆಯಿದೆ. ರಸ್ತೆಯ ಪಕ್ಕಕ್ಕೇ. ರಸ್ತೆಯ ಬದಿಯ ದಿಣ್ಣೆ ಯಲ್ಲಿ ನಿಂತರೆ, ಅನತಿ ದೂರದಲ್ಲಿ ಮರಗಳ ಮರೆಯಲ್ಲಿ ಅಡಗಿದ ಮನೆಯ ಹಂಚುಗಳು ಕಾಣಿಸುತ್ತವೆ. ದೊಡ್ಡವರು ರಸ್ತೆಯಲ್ಲಿ ನಿಂತು ಕೂಗಿದರೆ ಮನೆಯವರಿಗೆ ಕೇಳಿಸಲೂ ಸಾಕು. ಈ ತಾರ್ ರಸ್ತೆಯಲ್ಲಿ ಸದಾಗಾಲ ಪೇಟೆಯಿಂದ ಸ್ಟೇಶನಿಗೆ, ಸ್ಟೇಶನಿನಿಂದ ಪೇಟೆಗೆ ಓಡಾಡುವ ಟಾಂಗಾ ಕುದುರೆಗಳ ಕಾಲ ಲಾಳದ ಸಪ್ಪಳವು ರಾತ್ರಿ ಆಗಾಗ ಕೇಳಿಸುವುದೇನೋ ನಿಜ. ಮೋಟಾರ್ ಹಾರ್ನ್‌ಗಳ ಶಬ್ದ ಅರೆನಿದ್ದೆಯಲ್ಲಿರುವ ಮನೆ ಮಂದಿಯನ್ನು ಮುಖ್ಯವಾಗಿ ಶ್ರೀ ನಾರಾಯಣರಾಯರನ್ನು ಒಮ್ಮೊಮ್ಮೆ ಎಚ್ಚರಿ ಸುವುದುಂಟು.

ಇದೇ ನಾರಾಯಣ ರಾಯರ ಬಂಗಲೆ. ಈ ಸ್ಥಳವನ್ನು ಅವರು ಕೊಂಡು ಕಟ್ಟಿಸಿದರು. ಅವರು ಕ್ರಯಕ್ಕೆ ಪಡೆದು ಕೊಂಡಾಗ ಆ ಸ್ಥಳ ದಲ್ಲಿ ಮುರುಕು ಗುಡಿಸಲಿತ್ತಂತೆ. ಅದರ ಮಣ್ಣಿನ ಗೋಡೆಗಳು ಬಿರುಕು ಬಿಟ್ಟದ್ದುವು. ಬಿದಿರಿನ ಗಳಗಳಲ್ಲಿ ಜೀವವಿರಲಿಲ್ಲ. ದಂಬೆ ಹಂಚು ಹೊದೆಸಿದ್ದ ಮಾಡಿನಲ್ಲಿ ಸಣ್ಣದೊಡ್ಡ ತೂತುಗಳು. ಮಣ್ಣಿನ ನೆಲವೂ ಚನ್ನಾಗಿರಲಿಲ್ಲ. ಆದುದರಿಂದ ಇದ್ದ ಮನೆಯನ್ನೆ ದುರುಸ್ತಿಗೊಳಿಸಿ ಇರು ವಂತಿದ್ದಿಲ್ಲ. ಹೊಸ ಮನೆಕಟ್ಟಿಸುವ ಅವಶ್ಯಕತೆ ಬಿತ್ತು. ಹೊಸದನ್ನು ಕಟ್ಟಿಸುವುದೆಂದಾದ ಮೇಲೆ ಅಚ್ಚುಕಟ್ಟಾಗಿ ನಿರ್ಮಿಸುವುದೇ ಉತ್ತಮವೆಂದು

ಆಗಾರು ನಿರ್ಧರಿಸಿದರು. ಸರಿ, ಬಾವಿ ಅಗೆಸಿದರು. ಮನೆಗಾಗಿ ಕೆಂಪುಕಲ್ಲಿನ ತಳಗಟ್ಟು ಹಾಕಲ್ಪಟ್ಟಿತು. ಇಟ್ಟಿಗೆ ಗೋಡೆಗಳಾದುವು. ಅದರ ಮೇಲೆ ಅಟ್ಟ ನಿಂತಿತು. ಅಟ್ಟಕ್ಕೆ ಮಂಗಳೂರು ಹಂಚಿನ ಟೊಪ್ಪಿಗೆ. ಮನೆಯ ಸುತ್ತಲೂ ಎದೆಯುದ್ದ ಎತ್ತರದ ಗೋಡೆ ಮನೆಯ ಮುಂಭಾಗದಲ್ಲಿ ಕಬ್ಬಿಣದ ಸರಳುಗಳುಳ್ಳ ಗೇಟು. ಇಟ್ಟಿಗೆಗಳಿಂದ ಗೇಟಿನ ಕಂಬಕಟ್ಟಿದಾಗ, ಕಂಬದ ಮಧ್ಯ ಹೊರಮಗ್ಗುಲಲ್ಲಿ, ಸುಖಸಾಗರ" ಎಂದು ಬರೆದ ಬಿಳಿಶಿಲೆಯನ್ನು ಜೋಡಿಸಿಟ್ಟರು.

ಚಂದ್ರಕಾಂತ ಶಿಲೆಯಲ್ಲಿ ಕೆತ್ತಿದ್ದ ಈ "ಸುಖಸಾಗರ" ಶಬ್ದ ಮನೆ ಕಟ್ಟಿದಾಗ ಥಳಥಳಿಸುತಿತ್ತು. ಆ ಮೇಲೆ ಅದು ಗಾಳಿ ಮಳೆಗಳಿಗೆ ಮಸುಕಾಗಿದೆ. ಕಂಬದಲ್ಲಿ ಬೆಳೆದ ಹುಲ್ಲು ಆ ಪದದ ಕೆಲವು ಅಕ್ಷರಗಳನ್ನು ಮುಚ್ಚಿದೆ. ಮಾವಿನ ಮಿಡಿಯ ಬೇಟೆಗಾಗಿ ಆ ದಾರಿಯಲ್ಲಿ ಹಾದು ಹೋದ ಕಿಡಿಗೇಡಿ ಹುಡುಗರು ಮಸಿತುಂಡಿನಿಂದ ಒಂದೆರಡು ಅಕ್ಷರಗಳನ್ನು ವಿರೂಪ ಗೊಳಿಸಿರುವರು. ಕಂಬದ ಮೇಲ್ತುದಿಯಲ್ಲಿರುವ ಕೆಲವು ಇಟ್ಟಿಗೆಗಳು ಉರುಳಿವೆ ಗೇಟಿನ ಒಳ ಮಗ್ಗುಲಲ್ಲಿ ನೆಟ್ಟಿರುವ ಹೂ ಗಿಡಗಳ ಟೊಂಗೆಗಳು ಕಂಭದ ಮೇಲ್ಭಾಗವನ್ನು ಮುಚ್ಚಿರುವದರಿಂದ ಜರಿದ ಭಾಗವೆಲ್ಲ ಕಾಣುವುದಿಲ್ಲ. ಗೇಟಿನಿಂದ ಮನೆಯ ಮೆಟ್ಟಲಿನ ವರೆಗೆ ಇಮ್ಮಗ್ಗುಲುಗಳಲ್ಲಿಯೂ ಮಣ್ಣಿನ ಕುಡಿಕೆಗಳಲ್ಲಿ ನೆಟ್ಟ ಬಣ್ಣದ ಎಸಳುಗಳುಳ್ಳ ಗಿಡಗಳೂ ಹೂವಿನ ಸಸಿಗಳೂ ಇವೆ. ಹಲವು ಮಡಿಕೆಗಳಲ್ಲಿ ದಂಟುಗಳು ಮಾತ್ರ ಇವೆ. ಹೂವಿನ ಸಸಿಗಳು ಕೆಲವು ಬಾಡಿವೆ. ಮನೆ ಮೆಟ್ಟಲಿನ ಬಳಿ ನೆಟ್ಟಿರುವ ಮಲ್ಲಿಗೆಯ ಬಳ್ಳಿ ಬಿದಿರಿನ ಕಮಾನಿನ ಮೇಲೆ ಪಟ್ಟಾಗಿಹಬ್ಬಿದ್ದರೂ ಎಲೆಗಳೇ. ಕಂಪೌಂಡಿನಲ್ಲಿ ನೆಟ್ಟಿರುವ ಒಂದೆರಡು ತೆಂಗಿನ ಗಿಡಗಳೂ ಮುರುಟು ಗಟ್ಟಿವೆ. ಈ ಹವೆ ಆ ಗಿಡಗಳಿಗೆ ತಡಿಯುವುದಿಲ್ಲ. ಪಪಾಯಿ ಗಿಡದಲ್ಲಿ ಕಾಯಿಗಳೇ ಕಡಿಮೆ. ಉತ್ತಮ ಜಾತಿಯ ಸಸಿಯೆಂದು ಕೊಂಡು ನೆಟ್ಟು ಕಟ್ಟೆ ಕಟ್ಟಿದ ಮಾವಿನ ಗಿಡದಲ್ಲಿ, ಹಣ್ಣೇ ಅಪರೂಪ. ಮಂಗಗಳು ಅದರ ಹೂ, ಮಿಡಿಗಳನ್ನೊಂದನ್ನೂ ಬಿಡುವುದಿಲ್ಲ. ಮನೆಯ ಮೇಲೆ ಹಾರಾಡಿ ಒಂದೆರಡು ಹಂಚುಗಳನ್ನು ಪುಡಿಮಾಡಿವೆ. ಆ ರಂಧ್ರಗಳಿಂದ ನೀರು ಸೋರಿ ಮನೆಯ ಹಿಂಬದಿಯ ಗೋಡೆಯ ಸುಣ್ಣದ ಗಚ್ಚು ಗಾರೆ ಕೊರೆ ಕೊರೆದು ಸ್ವಲ್ಪ ಜರಿದಿದೆ. ಈ ನಾಲ್ಕಾರು ವರುಷಗಳಲ್ಲಿ ಅವರು ಇದನ್ನೆಲ್ಲ ಸರಿಪಡಿಸುವ ಗೋಜಿಗೆ ಹೋಗಿಲ್ಲ

ಹೌದು. ನಾರಾಯಣರಾಯರು ಧಾರವಾಡಕ್ಕೆ ಬಂದು ನಾಲ್ಕಾರು ವರುಷಗಳಾದುವು. ಮಗ ಪುರುಷೋತ್ತಮನನ್ನು ಕಾಲೇಜಿಗೆ ಕಳಿಸಲು ಅವರು ಆತುರರಾಗಿದ್ದರು. ಹಿರಿಹುಡುಗಿ ಸಾಗವೇಣಿಗೆ ಲಗ್ನವಾಗಿತ್ತು. ಬೇರೆ ಮಕ್ಕಳೂ ಅವರಿಗಿಲ್ಲ. ಆದ್ದರಿಂದ ಇದ್ದ ಒಬ್ಬನೇ ಮಗನಿಗೆ ಉಚ್ಚ ಶಿಕ್ಷಣ ಕೊಡಿಸಲು ಅವರ ಇಚ್ಛೆ. ಧಾರವಾಡದ ಹಾಟೇಲುಗಳಲ್ಲಿ ಅವನನ್ನು ಬಿಡಲು ಮನಸ್ಸಿಲ್ಲ. ಮಗ ಕಣ್ಮುಂದೆ ಇರಬೇಕೆಂದು ಅವರ ಆಸೆ ಅದೇ ಕಾಲಕ್ಕೆ ಅವರು ಕೆಲಸದಿಂದಲೂ ನಿವೃತ್ತರಾದರು. ಕಲಘಟಗಿ, ಹಾವೇರಿ, ನರಗುಂದ ಮೊದಲಾದ ಊರುಗಳನ್ನು ಸುತ್ತಿ ಸುತ್ತಿ ಅವರು ಬೇಸತ್ತಿದ್ದರು. ಅವರ ಜೀವಕ್ಕೆ ವಿಶ್ರಾಂತಿ ಬೇಕಾಗಿತ್ತು. “ ಧಾರವಾಡದಲ್ಲೇ ಮನೆಮಾಡೋಣ. ಹುಡುಗನ ಅಭ್ಯಾಸಕ್ಕೂ ಅನುಕೂಲ ” ಎಂದು ಗಂಗಮ್ಮನವರೂ ಸೂಚಿಸಿದರು. ಸರಿ, ಧಾರವಾಡಕ್ಕೆ ಬರಲು ಮತ್ತೆ ತಡವಾಗಲಿಲ್ಲ. ಬಂದು ನಾಲ್ಕಾರು ವರುಷಗಳೂ ಕಣ್ಣು ಮುಚ್ಚಿ ತೆರೆಯುವುದರೊಳಗೆ ಉರುಳಿವೆ.

ಈ ಆರು ವರುಷಗಳಲ್ಲಿ ಪುರುಷೋತ್ತಮನ ವಿದ್ಯಾಭ್ಯಾಸ ಸುಸೂತ್ರ ಬಿ. ಎ. ವರೆಗೂ ಸಾಗಿತು. ಅವನ ಪುಣ್ಯದಿಂದ ಅಂಚೆ ಖಾತೆಯಲ್ಲಿ ಕೆಲಸವೂ ದೊರೆಯಿತು. ಕಲಿಯುತಿದ್ದಾಗಲೇ ಅನೇಕ ಕಡೆಗಳಿಂದ ಹೆಣ್ಣಿನ ಕಡೆಯವರು ಬಂದಿದ್ದರು. ಆದರೆ, ಆಗ ಮದುವೆಯಾಗಲು ಅವನು ಬಯಸಲಿಲ್ಲ. “ ಎಲ್ಲಾದರೂ ನೌಕರಿ ಸಿಗಲಿ. ಆ ಮೇಲೆ ನೋಡೋಣ. ಈಗಲೇ ಬೇಡ” ಎಂದು ಹೇಳುತಿದ್ದ. ಕೆಲಸಕ್ಕೆ ಸೇರಿದ ಮೇಲೆ ಹೆಣ್ಣಿನವರು ಬಂದು ಮುತ್ತಿಗೆಯನ್ನೇ ಹಾಕತೊಡಗಿದರು. ಹುಡುಗಿಯರನ್ನು ನೋಡಲು ಅನೇಕ ಸಲ ರಜೆ ಪಡೆದುಕೊಂಡು ಸಾತಾರದಿಂದ ಧಾರವಾಡಕ್ಕೆ ಬಂದುದೂ ಇದೆ. ಒಮ್ಮೊಮ್ಮೆ ತಾಯಿತಂದೆಯರ ಮನಸ್ಸಿಗೆ ಬಂದುದು ಅವನಿಗೆ ಇಷ್ಟವಾಗಲಿಲ್ಲ. ಎಲ್ಲರೂ ಒಪ್ಪಿಕೊಂಡಾಗ ಸಗೋತ್ರ ಅಡ್ಡ ಬಂತು. ಒಂದೆರಡು ಕೊಡುತೆಗೆದುಕೊಳ್ಳುವ ವ್ಯವಹಾರದಲ್ಲಿ ಮುರಿದುವು. ಸಾತಾರಾ–ಧಾರವಾಡ, ಧಾರವಾಡ-ಸಾತಾರಾ ಓಡಾಡಿ ಪುರುಷೋತ್ತಮನಿಗೆ ಜಿಗುಪ್ಸೆಯೇ ಬಂದಿತು.

“ ಇನ್ನು ನೀವೇ ನೋಡಿ ಗೊತ್ತುಮಾಡಿ. ನಾನು ಬರಲಾರೆ ”

ಎಂದು ಜೋಷಿಯರಿಂದ ಕೊನೆಗೆ ತಾಯಿ ಮುಂದೆ ನುಡಿದ.

"ನಾವು ನೋಡಿದ್ದು ನಿನಗೆ ಒಪ್ಪಿಗೆಯಾದೀತೇ ?" ಎಂದು ಅವರು ಪ್ರಶ್ನಿಸಿದರು.

"ಚೆನ್ನಾಗಿದ್ದರೆ ಒಪ್ಪದೆ ಏನು ?" ಎಂದು ಸುರಿ ಅವನು ಹೊರಟು ಹೋದ.

ಮಗನ ಮಾತನ್ನು ಗಂಗಮ್ಮ ರಾಯರ ಮುಂದೆ ಅರುಹಿದರು. ಅವರಿಗೆ ಅದರಿಂದ ಅತ್ಯಂತ ಸಂತೋಷವೇ ಆಯಿತು. ಆದರೆ ಜವಾಬ್ದಾರಿ ಹೆಚ್ಚು ತನ್ನ ಮೇಲೆ ಬಿದ್ದುದನ್ನು ಕಂಡುಕೊಂಡರು. ಮೊದಲಿಗಿಂತಲೂ ಜಾಗ್ರತೆಯಿಂದ ಸೊಸೆಯ ಅನ್ವೇಷಣೆ ಮಾಡಲಾರಂಭಿಸಿದರು. ಕೊನೆಗೆ ಹುಡುಗಿ ಹತ್ತಿರವೇ ಕುಳಿತಿತ್ತು, ಸಾಧನಕೇರಿಯಲ್ಲಿ. ಮದುವೆ ನಿಶ್ಚಯಿಸಿ ಮಗನನ್ನು ಕರೆಸಿಕೊಂಡರು. ಅವನಿಗೆ ಬಹಳ ದಿನಗಳ ವರೆಗೆ ರಜೆಯೂ ದೊರೆತಿರಲಿಲ್ಲ. ದೀರ್ಘಕಾಲ ಉಳಿಯುವಂತಿರಲಿಲ್ಲ. ಆದುದರಿಂದ ಪ್ರಸ್ತವನ್ನು ಅವರು ಮುಂದೆ ಹಾಕಿದರು. ಪುರುಷೋತ್ತಮ ಅನ್ಯ ಮನಸ್ಕನಾಗಿ ಮರಳಿದ.

ಉಪಾಯವಿಲ್ಲ. ಶುಭಶೋಭನವಾಗದೆ ಲಗ್ನವಾದ ಕೂಡಲೇ ಗಂಡನೊಂದಿಗೆ ಹುಡುಗಿಯನ್ನು ಕಳಿಸುವ ಲೋಕ ರೂಢಿ ಕಡಿಮೆ. ಒಂದು ವೇಳೆ ಪ್ರಸ್ತ ಜರುಗುತ್ತಿದ್ದರೂ ಪುರುಷೋತ್ತಮ ಹೆಂಡತಿಯನ್ನು ಆಗಿಂದಾಗ್ಗೆ ಕರೆದೊಯ್ಯುತ್ತಿದ್ದನೋ ಇಲ್ಲವೋ. ಏಕೆಂದರೆ, ಸಾತಾರಾ ಧಾರವಾಡದ ಕೂಗಳತೆ ದೂರದಲ್ಲಿಲ್ಲ. ಪರಸ್ಥಳ. ಅಲ್ಲದೆ, ಹೊಸ ಸಂಸಾರ ಹೂಡುವವ್ಯವಸ್ಥೆಯನ್ನೂ ಮಾಡಿಲ್ಲ.ಮನೆಯನ್ನೂ ಹುಡುಕಿಕೊಂಡಿಲ್ಲ.ಆದರೆ ಮನೆಯನ್ನು ಮೊದಲೇ ಗೊತ್ತು ಹಚ್ಚಿದ್ದರೂ ಗಂಗಮ್ಮನವರುಸೊಸೆಯನ್ನು ಕಳಿಸುತ್ತಿದ್ದರೋ ಇಲ್ಲವೋ ಸಂದೇಹ. ಇಲ್ಲೊಂದು ಸಂಸಾರ. ಅಲ್ಲೊಂದು ಸಂಸಾರ. ಎರಡೂ ಹೊರಲಾರದ ಹೊರೆ. ಒಂದೆಡೆ ಎಲ್ಲರೂ ಒಟ್ಟಿಗೆ ವಾಸಿಸಲು ಅವರ ಆತುರ. ಮುಪ್ಪಿನ ಪ್ರಾಯದಲ್ಲಿ ಮಕ್ಕಳೊಂದಿಗೆ ಇರಬೇಕೆಂದು ಹಿರಿಯರು ಬಯಸುವುದೂ ಸಹಜವೇ. ಆದರೆ, ಸಾತಾರಾ ಗಿತಾರಾ ದೂರ ಊರುಗಳಿಗೆ ತೆರಳಲು ಆ ದಂಪತಿಗಳಿಗೆ ಇಷ್ಟವಿಲ್ಲ. ಊರಿನಲ್ಲಿ ಸ್ವಂತ ಮನೆಯೂ ಇದೆ. ಸ್ವಂತ ಮನೆಯಲ್ಲಿ ನೀರುಕುಡಿದು ಗಾಳಿ

ತಿಂದು ಹಾಯಾಗಿ ಬಿದ್ದು ಕೊಳ್ಳುವುದೇ ಸುಖ. ಪರಸ್ಥಳಕ್ಕೆ ತೆರಳಿ ಬೆಂಗೈ ಅಗಲದ ಕೋಣೆಗಳನ್ನು ಬಾಡಿಗೆ ಹಿಡಿದು ಜೀವಿಸ ಬೇಕೆಂದು ಯಾವ ಬ್ರಹ್ಮ ಬರೆದಿದ್ದಾನೆ? ಅದು ಸಾಧ್ಯವೂ ಇಲ್ಲ ಇನ್ನು. ಆದುದರಿಂದ ಮಗ ಧಾರವಾಡಕ್ಕೆ ಬಂದರೆ ಉತ್ತಮ ಎಂದವರ ಆಸೆ. "ಧಾರವಾಡಕ್ಕೆ ವರ್ಗ ಮಾಡಿಸಿಕೋ. ನಾಲ್ಕು ಜನರಿಗೆ ದೊಡ್ಡ ಸಲಾಂ ಹೊಡಿ. ಆಫೀಸರರ ಬೆನ್ನು ಹಿಡಿ. ನಾಲ್ಕುಕಾಸು ಪುಡಿಯಾದರೂ ಚಿಂತಿಲ್ಲ. ಸಾಧಿಸಿ ಸಬಳ ನುಂಗಬೇಕಪ್ಪಾ" ಎಂದು ಪದೇ ಪದೇ ನಾರಾಯಣ ರಾಯರು ಮಗನಿಗೆ ಪತ್ರಗಳನ್ನು ಬರೆಯುತಿದ್ದರು. ಅವನು ಊರಿಗೆ ಬಂದಾಗ, "ಏನು? ಏನಾಯ್ತು? ಪ್ರಯತ್ನ ನಡೆಸಿದ್ದೀಯೋ?" ಎಂದು ದಿನಂಪ್ರತಿ ನೂರಾರುಸಲ ಕೇಳುತಿದ್ದರು. "ಹುಂ" ಎಂದು ಅವನು ತಲೆಅಲ್ಲಾಡಿಸುತಿದ್ದ. ಆದರೆ ಲಗ್ನವಾದ ಮೇಲೆ ಆ ಪ್ರಶ್ನೆಯನ್ನೇ ಅವರು ಕೇಳಲಿಲ್ಲ. ಮನೆಯಲ್ಲೇ ಈಗ ಸೂಜಿಗಲ್ಲು ಇದೆ. ಅದು ತಾನಾಗಿ ಪುರುಷೋತ್ತಮನನ್ನು ಆಕರ್ಷಿಸುತ್ತದೆ ಎಂದು ಅವರ ಮನಸ್ಸಿಗೆ ಖಚಿತವಾಗಿದೆ.

ಲೋಹಚುಂಬಕಕ್ಕೆ ಆಕರ್ಷಣ ಶಕ್ತಿ ಇದೆಯೇನೋ ನಿಜ. ಅದು ನಿಸರ್ಗ ನಿಯಮ. ಆದರೂ ಅದಕ್ಕೆ ಅನುಕೂಲ ವಾತಾವರಣವೂ ಅವಶ್ಯ ಶೋಭನ ಪ್ರಸ್ತವನ್ನು ಮುಂದೂಡಿದುದು ಗಂಗಮ್ಮನವರ ಮನಸ್ಸಿಗೇ ಬಂದಿರಲಿಲ್ಲ. "ಇಷ್ಟು ವರುಷಗಳಾದರೂ ನಿಮಗೆ ಇನ್ನೂ ಬುದ್ಧಿ ಬಂದಿಲ್ಲ" ಎಂದು ಒಂದುದಿನ ಅವರು ಹಂಗಿಸಿದರು.

"ಅದನ್ನು ಕಂಡು ಹಿಡಿಯಲು ಇಷ್ಟು ವರುಷ ಬೇಕಾಯಿತಲ್ಲ ನಿನಗೆ! ಅಬ್ಬಾ! ನಿನ್ನ ಬುದ್ಧಿಯೇ! ತಮ್ಮಂತೆ ಪರರು ಎಂಬ ಭಾವನೆ ಹೆಣ್ಮಕ್ಕಳಿಗೆ! ಇರಲಿ, ನನಗೆ ಬುದ್ಧಿಯಿಲ್ಲದೆ ಮಾಡಿದ ಅಚಾತುರ್ಯ ಕೆಲಸ ಯಾವುದು ಹೇಳು?"

"ಅದನ್ನು ನಾನು ಹೇಳಬೇಕೇನು? ನಿಮ್ಮ ಸ್ವಬುದ್ಧಿಗೇ ಹೊಳೆಯ ಬೇಕಾಗಿತ್ತು. ಈಗಿನ ಕಾಲದ ಹುಡುಗರ ಮನೋವೃತ್ತಿಯೇ ಬೇರೆ. ಲಗ್ನದ ಮೊದಲೇ ಹುಡುಗಿಯೊಡನೆ ಸ್ನೇಹ ಬೆಳೆಸಲು ಅವರ ತವಕ. ಹಾಗಿರುವಾಗ ಲಗ್ನವಾದ ಮೇಲೂ ಶೋಭನ ಮುಗಿಸದಿದ್ದರೆ ಹೇಗಿರುತ್ತದೆ? ಈಗಿನ ಹುಡುಗರೇನು ಹಲ್ಲುಬಾರದ ಮುದ್ದು ಮಕ್ಕಳೇ? ಹಿಂದಿನ ಕಾಲದಂತೆ

ಹತ್ತು ಹನ್ನೆರಡು ವರುಷನಾ ಹುಡುಗಿಯರಿಗೆ ಲಗ್ನದ ಕಾಲಕ್ಕೆ ? ಧಾರೆ ನೀರು ಯಾವ ಗಳಿಗೆ ಬಿದ್ದೀತೆಂದು ಕಾದಿರುತ್ತಾರೆ. ಅಷ್ಟೂ ಗೊತ್ತಾಗುದಿಲ್ಲವೇ ನಿಮಗೆ ? ''

"ಗೊತ್ತಾಗಲಿಲ್ಲ" ಎಂದುತ್ತರ ಕೊಟ್ಟವರಂತೆ ನಾರಾಯಣರಾಯರು ಮುಚ್ಚದ ಕಣ್ಣುಗಳಿಂದ ನೆಲವನ್ನು ದಿಟ್ಟಿಸಿದರು.

ಗಂಗಮ್ಮನವರು ಮಾತು ಮುಂದುವರಿಸಿದರು. "ಉತ್ತಮನಿಗೆ ಸ್ವಲ್ಪ ಬೇಸರವಾಗಿರಬೇಕು ಅವನು ವಿಶೇಷ ನನ್ನೊಡನೆ ಮಾತನಾಡಲಿಲ್ಲ. ಮೋರೆ ಕಳೆಗುಂದಿತ್ತು. ಉಲ್ಲಾಸ ವಿರಲಿಲ್ಲ. ಏನೋ ವಿಚಾರದಲ್ಲಿದ್ದವನಂತೆ ಕಾಣುತ್ತಿತ್ತು. ಹೋದಮೇಲೆ ಪತ್ರ ಬಂತೇನು ?"

"ಇಲ್ಲ"

"ನನಗೆ ಗೊತ್ತು!" ಎಂದ ಗಂಗಮ್ಮನವರು ಬೇರೆ ಕೆಲಸಕ್ಕೆ ತೊಡಗಿದರು.

"ಹುಂ" ಎಂದು ನೆಲಕ್ಕೆ ಬಲಕೈ ಊರಿ ಪ್ರಯಾಸದಿಂದ ಎದ್ದ ನಾರಾಯಣರಾಯರು, "ಮತ್ತೆ ನಿನ್ನ ಸೊಸೆಗೆ ಪತ್ರ ಬಂದಿದೆಯೇನು ?" ಎಂದು ಹೆಂಡತಿಗೆ ಕೇಳಿಸುವ ಹಾಗೆ ಪ್ರಶ್ನಿಸಿದರು.

" ನನಗೆ ಗೊತ್ತಿಲ್ಲ "

' ಹುಂ '' ಎಂದುಸುರುತ್ತ ನಾರಾಯಣರಾಯರು ಹೊರ ಜಗಲಿಗೆ ಬಂದರು ಸೊಸೆ ಮನೆ ಮುಂದೆಯೇ ಕೆಲಸದಲ್ಲುದ್ಯುಕ್ತಳಾಗಿದ್ದಳು. ಹೂವಿನ ಮಡಿಕೆಗಳಿಗೆ ನೀರೆರೆದು ಕೊಡವನ್ನು ಒಂದೆಡೆ ಇಟ್ಟಿದ್ದಳು. ನೀರು ಕಾಣದೆ ಒಣಗಿದ್ದ ಗುಲಾಬಿಯ ಎಲೆಗಳು ಈಗ ಬಹಳ ಹಸುರಾಗಿವೆ. ಹಾಲುಣಿಸಿದ ಶಿಶುಗಳಂತೆ ಕಿರುಕಿನಗೆ ಬೀರುತ್ತಿವೆ. ಸಂತೋಷದಿಂದ ತಲೆಯನ್ನು ಅತ್ತಿತ್ತ ಅಲುಗಾಡಿಸುತ್ತಿವೆ. ಸಸಿಯಿಲ್ಲದ ಒಂದು ಮಣ್ಣಿನ ಮಡಿಕೆಯೂ ಇಲ್ಲ. ಎಲ್ಲ ಮಡಿಕೆಗಳಲ್ಲೂ ಸಸಿಗಳನ್ನು ನೆಟ್ಟಿರುವಳು. ಕುರ್ಚಿಗಿಯಿಂದ ಗಟ್ಟಿಯಾಗಿದ್ದ ಮಡಿಕೆಯೊಳಗಿನ ಮಣ್ಣನ್ನು ಕುಕ್ಕಿ ಬಿದುಗೊಳಿಸಿರುವಳು. ಮಡಿಕೆಗಳಿಂದ ನೀರು ಹೊರಗೆ ಜಿನುಗಿ ಅವುಗಳ ಸುತ್ತಲೂ ಭತ್ತದ ಸಸಿಗಳಂತೆ ಹಸುರು ಹುಲ್ಲಿನ ಅಲಗುಗಳು ಮೂಡಿವೆ. ಮೆಟ್ಟಲಿನ ಬಳಿ ಕಮಾನಿನ ಮೇಲೆ ಹಾಗೂ ಸುತ್ತಲೂ

ಅಡ್ಡಾದಿಡ್ಡಿಯಾಗಿ ಹಬ್ಬಿದ್ದ ಮಲ್ಲಿಗೆಯ ಕೈಗಳನ್ನು ಹಧ್ಗದಿಂದ ಬಿದಿರಿಗೆ ಅಲ್ಲಲ್ಲಿ ಬಿಗಿದು ಶೃಂಗರಿಸಿದ್ದಳು. ಇದನ್ನು ಕಂಡು ನಾರಾಯಣರಾಯರ ಹೃದಯದಲ್ಲಿ ಒಲವಿನ ಸೆಲೆ ಪುಟಿಯತೊಡಗಿತು. ಬೇಸರದ ಮೋರೆಯಲ್ಲಿ ಮತ್ತೆ ನಗು ಮಿಂಚಿತು. ಭಾವ ಅರಳಿತು ಏನನ್ನೋ ಕೇಳಲು ಬಂದವರು ಪುತ್ತೇನನ್ನೋ ಸ್ಮರಿಸಿಕೊಂಡು ಒಳಗೆ ಹೊರಟು ಹೋದರು.

ಹತ್ತು ಹದಿನೈದು ನಿಮಿಷಗಳ ಮೇಲೆ ಅವರ ಸವಾರಿ ಪುನಃ ಹೊರಗೆ ಬಂದಿತು. ಈ ಸಲ ಪೇಟೆಗೆ ತೆರಳಲು ಸಿದ್ಧರಾಗಿದ್ದರು. ಧೋತರ ಅಂಗಿ, ಕೋಟು, ತಲೆಯ ಮೇಲೊಂದು ಕಪ್ಪು ಟೊಪ್ಪಿಗೆ ಇವೇ ಅವರ ಉಡುಗೆ. ಆದರೆ, ಕುತ್ತಿಗೆಗೊಂದು ಚೊಕಲೇಟ್ ಬಣ್ಣದ " ಮಫ್ಲರ್ " ಸುತ್ತಿದ್ದರು. ಅದರ ಒಂದು ಚುಂಗು " ನೆಕ್‌ಟೈ " ಯಂತೆ ಎದೆಯ ಮೇಲೂ ಇನ್ನೊಂದು ಚುಂಗು ಜುಟ್ಟಿನಂತೆ ಬೆನ್ನ ಮೇಲೂ ಶೋಭಿಸುತ್ತಿತು. ಧೋತರ ಧರಿಸಿದಾಗಲೂ ಕಾಲುಗಳಿಗೆ ಕಾಲುಚೀಲವನ್ನು ತುರುಕಿಸಿ ಕೊಳ್ಳಲು ಅವರು ಮರೆಯುವುದಿಲ್ಲ. ಮಳೆ, ಚಳಿ, ಬೇಸಿಗೆ ಕಾಲಗಳೆಂಬ ಭೇದಗಳನ್ನೆಣಿಸದೆ, ಸದಾಗಾಲ ಹೊರಹೊರಟಾಗ ಅವರು ಮಫ್ಲರ್ ಮತ್ತು ಕಾಲುಚೀಲಗಳನ್ನು ಹಾಕಿಕೊಳ್ಳುವುದು ರೂಢಿ. ಮಳೆ ಮತ್ತು ಚಳಿಗಾಲಗಳಲ್ಲಂತೂ ಬೆಚ್ಚನೆಯ ಈ ಎರಡು ವಸ್ತ್ರಗಳೂ ಅವಶ್ಯ. ಆದರೆ ಬಿಸಿಲಿನ ತಾಪ ಸಹಿಸಲಾರದೆ ಒಳಲಿ ಬಾಡುವ ದಿನಗಳಲ್ಲೂ ಅವುಗಳನ್ನು ಧರಿಸುವುದು ಸ್ವಲ್ಪ ವಿಚಿತ್ರ ಅಲ್ಲವೇ ?

ಆದರೆ, ನಾರಾಯಣರಾಯರ ದಿನಚರಿಯನ್ನರಿತವರಿಗೆ ಅದು ಆಶ್ಚರ್ಯವಾಗಿ ತೋರಲಾರದು. ಏಕೆಂದರೆ, ಬಿಸಿಲಿಗೆ ಅವರು ತಲೆಹೊರಗ ಹಾಕುವುದಿಲ್ಲ. ನಸುಕಿಗೆ ಮತ್ತು ಸಂಜೆ ಮಾತ್ರ ಗವಿಯಿಂದ ಹೊರಬೀಳುವರು. ನಸುಕಿಗೆ ಅವರು ಎದ್ದಾಗಲೇ ಚಹಾ ಸಿದ್ಧವಾಗುತ್ತದೆ. ಬಿಸಿನೀರಲ್ಲಿ ಕೈಮೋರೆ ತೊಳೆದುಕೊಂಡು ಬಂದವರು ಹಾಸಿಗೆಯಲ್ಲೇ ಪದ್ಮಾಸನ ಹಾಕಿದವರಂತೆ ಕುಳಿತು ಬಿಸಿ ಬಿಸಿ ಚಹಾ ಗಂಟಲೊಳಗೆ ಸುರಿದು ಬಿಡುವರು. ಒಂದೊಂದು ಕಪ್ ಎಲ್ಲಿಗೆ ಸಾಕು ? ಮಾಡಿದುದರಲ್ಲಿ ಮಾಡಿದವರಿಗೆ ಒಂದು ಕಪ್ ಉಳಿದರೆ ಅವರ ಪುಣ್ಯ. ಆ ಮೇಲೆ, ಅಲ್ಲೇ ಕಾಲುಚೀಲ ಸಿಕ್ಕಿಸಿಕೊಂಡು ಏಳುವರು. ವೇಷಭೂಷಣ ಧರಿಸಿ ಕುತ್ತಿಗೆಗೆ ಮಫ್ಲರ್

ಸುತ್ತುವರು. ಕೈಯಲ್ಲಿ ಒಂದು ಬೆತ್ತ ಹಿಡಿದುಕೊಂಡು ಮುಂಜಾನೆಯ ವಿಹಾರಕ್ಕೆ ಹೊರಡುವರು. ಬಿಸಿಲು ಬೀಳುವುದರೊಳಗಾಗಿ ಮನೆಯಲ್ಲಿ ಹಾಜರ್ ಮತ್ತೆ ಹೊರಡುವುದು ಸಂಜೆಗೇ. ಸ್ನಾನ, ಪೂಜೆ ಪುನಸ್ಕಾರ, ಊಟ, ನಿದ್ದೆ, ಸಾಯಂಕಾಲದ ಚಹಾ ಇವೆಲ್ಲ ಮುಗಿದು ಸಂಜೆಯ ತಂಗಾಳಿ ಬೀಸುವ ಹೊತ್ತಿಗೆ. ಆಗ ಹೊರಡುವಾಗ ಊರುಗೋಲಿನೊಂದಿಗೆ ಒಂದು ಕೈ ಚೀಲವೂ ಇರುತ್ತದೆ. ಪೇಟೆಗೆ ಸವಾರಿ ಚಿತ್ತೈಸುತ್ತದೆ. ಪುನಃ ಮನೆಗೆ ಮರಳುವಾಗ ಎಂಟಾದರೆ ಎಂಟು. ಒಂಬತ್ತಾದರೆ ಒಂಬತ್ತು. ಗಾಳಿ ರುಮುರುಮು ಬೀಸುತ್ತಿರುತ್ತದೆ. ಆದುದರಿಂದ ಸದಾಕಾಲವೂ ಅವರಿಗೆ ಕಾಲುಚೀಲ ಮತ್ತು ಮಫ್ಲರ್ ಬೇಕೇ ಬೇಕು.

ಇಂದು ಮಾತ್ರ ಅವರು ಹೊರಟು ನಿಂತಾಗ ಮುಂಜಾನೆ ಸಂಜೆ ಎರಡೂ ಅಲ್ಲ. ಆದರೆ ಯಾರಾದರೂ ಹಿರಿಯರು ಹೊರಟಾಗ, "ಎಲ್ಲಿಗೆ?" ಎಂದು ಅರಿತವರು ಕೇಳುವುದಿಲ್ಲ. ಅದೂ ಒಂದು ಸಂಪ್ರದಾಯ. ಹಾಗೆ ಕೇಳಿದರೆ ಅವುಗಳಲ್ಲಿ ನಂಬಿಗೆಯಿದ್ದವರು ಸಿಟ್ಟಾಗುತ್ತಾರೆ. ಅದು "ಅಪಶಕುನ'' ಎಂಗವರ ತಿಳುವಳಿಕೆ. ಶುಭ ಶೋಭನ ಕಾರ್ಯ ನಿಮಿತ್ತ ಹೊರಟವರು ಮನಸ್ಸು ಹಿಂಡಿಕೊಳ್ಳುವರು. ಅರ್ಧದಲ್ಲೇ ಹಿಂದೆ ಬರುವುದೂ ಉಂಟು. ಸ್ವಲ್ಪ ಹೊತ್ತು ಮನೆಯಲ್ಲಿ ಕುಳಿತು ಮತ್ತೆ ಹೊರಡುವುದೂ ಪದ್ಧತಿ. ಅಂಗಳದಲ್ಲಿ ಹೂವಿನ ಸಸಿಗಳಿಗೆ ನೀರೆರೆಯುತ್ತಿದ್ದ ಸೊಸೆ ಈ ಶಿಷ್ಟಾಚಾರವನ್ನರಿಯದವಳಲ್ಲ. ಆದುದರಿಂದ ಮಾವಯ್ಯನವರು ಚಪ್ಪಲಿ ಎಳೆದು ಎಳೆದು ನಡೆದುಕೊಂಡು ಬಂದಾಗ ಅವಳು ಅತ್ತ ನೋಡಿಯನ್ನು ತಿರುಗಿಸದೇ ಕುಳಿತಿದ್ದಳು. ಅವಳ ಬಳಿಗೆ ಬಂದ ನಾರಾಯಣರಾಯರು ಅವಳ ಬೆನ್ನಮೇಲೆ ಹಾವಿನಂತೆ ಗಾಳಿಗೆ ಅಲುಗುತಿದ್ದ ಜಡೆಯನ್ನು ಹಿಡಿದು ಎಳೆದು ನಕ್ಕರು. ಸೊಸೆ ಎದ್ದು ಲಜ್ಜೆಯಿಂದ ತಲೆತಗ್ಗಿಸಿದಳು. ಅವರ ಮಕ್ಕಳಾಟದ ಮರುಳು ಬುದ್ಧಿ ಕಂಡು ಮುಚ್ಚಿದ್ದ ಆವಳ ಎಸಳು ತುಟಿಗಳು ಮುಗುಳು ಮುಗುಳಾಗಿ ಅರಳಿದುವು.

"ಮಗೂ ಈಗ ಬಂದೆ. ಭಟ್ಟರಲ್ಲಿ ತೆರಳಿದೆನೆಂದು ಅವಳಿಗೆ ಹೇಳು." ಎಂದುಸುರಿದರು. ಕೈಗಳ ಮಣ್ಣನ್ನು ಕೊಡಹಿಕೊಂಡು ಒಳಗೋಡಲು ಅವಳು ಸಿದ್ಧವಾದಾಗ, "ಉತ್ತಮ ಬೇಗ ಬರುತ್ತಾನೆ. ಚಿಂತೆ ಮಾಡ

ಬೇಡ" ಎಂದರು. ಆದರೆ ಅವಳ ಮೊಗದಾವರೆಯಲ್ಲಿ ಬಿಂಬಿಸಿದ ಪ್ರತಿಕ್ರಿಯೆಯನ್ನು ನೋಡಲು ಅವರು ನಿಲ್ಲಲಿಲ್ಲ. ಗೇಟಿನ ಚಿಲುಕವನ್ನು ಹಾರಿಸಿ ಸ್ವಲ್ಪ ದೂಡಿ ಮತ್ತೆ ಚಿಲುಕವಿಕ್ಕಿ ಹೊರಗೆ ಬಂದರು. ಸುಖದ ವಿಚಾರಗಳಲ್ಲಿ ಮಗ್ನರಾಗಿದ್ದ ಅವರ ದೃಷ್ಟಿಗೆ "ಸುಖಸಾಗರ" ಚಂದ್ರಕಾಂತ ಶಿಲೆ ಕಾಣಿಸಿತು. ಧೋತರದ ಚುಂಗಿನಿಂದ ಮಸುಕಾಗಿದ್ದ ಆ ಸವಿಯಾದ ಶಬ್ದವನ್ನು ಒರಸ ತೊಡಗಿದರು.

## ಎರಡನೆಯ ಅಧ್ಯಾಯ

ಮದುವೆ ಮಾನವ ಜೀವನದ ಒಂದು ಸೌಭಾಗ್ಯ. ಬಡವನಿರಲಿ, ಬಂಡವಲುಗಾರನಿರಲಿ ಯಾರಿಗಾದರೂ ಅಷ್ಟೆ. ಬಾಳಿನ ಗಿಡದಲ್ಲಿ ಅಂದೇ ಪ್ರೇಮದ ಮಂದಾರ ಹೂ ಅರಳಲಾರಂಭಿಸುತ್ತದೆ. ಜೀವನದ ಅವಸ್ಥೆಯಲ್ಲಿ ಅದು ವಸಂತಾಗಮನ. ಗಾಳಿಗೂ ಅದನ್ನು ಕಂಡು ಹಿಗ್ಗು. ಹೂವಿನ ತೋಟದೊಳಗೆ ಪ್ರವೇಶಿಸಲು ಅದೂ ಕಾತರ ಪಡುತ್ತದೆ. ಅದಕ್ಕೂ ಶುಭ ಶೋಭನದ ಒಂದು ಗಳಿಗೆ ಇದೆಯಲ್ಲ.!

ಪುರುಷೊತ್ತಮನ ಜೀವನದಲ್ಲೂ ಅಂತಹ ಸುಖ ಗಳಿಗೆ ಬಂದಿದೆ. ತಂದೆಯ ಪತ್ರ ಮುಟ್ಟಿದ ದಿನವೇ ರಜೆ ಅರ್ಜಿ ಬರೆದು ಪೋಸ್ಟ್ ಮಾಸ್ತರರ ಮುಂದೆ ನಿಂತ. ಅವರು ವಿಶಾಲವಾದ ಮೇಜಿನ ಪಕ್ಕದಲ್ಲಿ ಕುಳಿತು ತಲೆ ತಗ್ಗಿಸಿ ಸಹಿ ಹಾಕುತಿದ್ದಾರೆ. ಆ ದೊಡ್ಡ ತಲೆಯಲ್ಲಿ ಕೂದಲುಗಳು ಕೆಲವೇ. ಇದ್ದುದೂ ನರೆತಿವೆ. ಹುಲಿ ಮೀಶೆ ಮಾತ್ರ ಎದ್ದು ಕಾಣಸುತ್ತಿದೆ. ಆದರಂತೆ ಅವರು ತೊಟ್ಟ ಛಾಳೀಸ್ ಕೂಡಾ. ಆ ಕನ್ನಡಕದ ಗಾಜುಗಳು ಅರ್ಧ ಇಂಚು ದಪ್ಪ ಇವೆಯೋ ಏನೋ. ಮೇಜಿನ ಮೇಲೆ ಬಿದ್ದ ಕಾಗದ ಪತ್ರ, ಫಾರ್ಮ್‌ಗಳಿಗೂ ಲೆಕ್ಕವಿಲ್ಲ. ಕೆಲವು ನಿಮಿಷಗಳ ವರೆಗೆ ಅವರು ತಲೆಯನ್ನು ಎತ್ತಲಿಲ್ಲ. ಕೊನೆಗೆ ಕಿಕ್ಕಣ್ಣಿನಿಂದ ನೋಡುತ್ತ, "ಏನು? ಏನು ? ಏನು ? " ಎಂದು ಪ್ರಶ್ನಿಸಿದರು.

" ಒಂದು ವಾರದ ರಜೆ.... "

ಅವನು ವಾಕ್ಯ ಮುಗಿಸಿರಲಿಲ್ಲ. ಅವರು ಮೈ ಮೇಲೆಯೇ ಬಿದ್ದರು. " ಏನು? ರಜೆ ? ಹದಿನೈದು ದಿನಗಳಿಗೊಮ್ಮೆ ರಜೆ ? ರಜೆಗೆ ಲೆಕ್ಕವೇ ಇಲ್ಲ ವೇನು ? ಪ್ರತಿ ಭಾನುವಾರ ದೊರೆವ ರಜೆ ಸಾಲದೇ ? ಕ್ಯಾಜುವಲ್ ಲೀವ್, ಸಿಕ್‌ಲೀವ್, ಇವುಗಳಿಗಂತೂ ಆದಿ ಅಂತ್ಯವಿಲ್ಲ. ಆಫೀಸು ವೇಳೆ ಯಲ್ಲಿ ಹಾಟೇಲುಗಳಿಗೆ ಸುಸುಳಿ, ತಾಸು ಅರ್ಧತಾಸು ತೆಗೆದು ಕೊಳ್ಳುವ " ಲಿಬರ್ಟಿಲೀವ್ " ನಡೆದೇ ಇದೆ. ಇನ್ನು ಫ್ರೇಂಚ್ ಲೀವ್ ಕೂಡಾ ಕೂಡಿ ಸಿರಿ ಮದುವೆ, ಮುಂಜಿ, ಶೋಭನಗಳಂತೂ ತಪ್ಪಿಲ್ಲ. ! ಛೀ ಛೀ ! ನನಗೆ ಸಾಕಾಯಿತು. ನನಗೆ ಕುತ್ತಿಗೆಯ ವರೆಗೆ ಬಂದಿದೆ. ನನಗೂ ರಜೆ ಬೇಕಾಗಿದೆ. ಮುಮುಕ ಮನುಷ್ಯ ನನ್ನಿಂದ ಕೆಲಸ ಸಾಗುವುದಿಲ್ಲ. ನೋ, ನೋ, ಇಲ್ಲ. ಇಲ್ಲ. ನನಗೆ ಗೊತ್ತಿಲ್ಲ. ನನಗೆ ಗೊತ್ತಾಗುವದಿಲ್ಲ " ಎಂದು ಅವರು ಒದರಾಡಿದರು

ಪುರುಷೋತ್ತಮ ಇನ್ನಷ್ಟು ಒಳಿಸಾರಿ ಋತುಶಾಂತಿ ಗೊತ್ತು ಮಾಡಿದ್ದಾರೆ " ಎಂದ.

" ಏನು ? ಋತುಶಾಂತಿ "

" ಹುಂ, ಶೋಭನ "

ಕಣ್ಣುಗಳಂತೆ ಕಿವಿಗಳೇನೂ ದೂರವಾಗಿಲ್ಲ ಮಾಸ್ತರರದ್ದು. ಪುರುಷೋತ್ತಮನ ಬಾಯಿಂದ ಆ ಮಾತುಗಳು ಉದುರಿದೊಡನೆಯೇ ಅವರು ಕಿವಿ ನಿಗುರಿಸಿದರು. ಮೋರೆಯನ್ನೆತ್ತಿ ಬಾಯಿ ಅಗಲಿಸಿ ಅವನನ್ನೇ ದಿಟ್ಟಿಸಿದರು. ಸಿಟ್ಟಿನ ಅವರ ಮುನಿಸು ಮೋರೆಯಲ್ಲಿ ನಗುವಿನ ಗೆರೆಗಳು ಹೊಳೆದುವು. ಕನ್ನಡಕವನ್ನು ಮೂಗಿನ ತುದಿಯ ವರೆಗೆ ಎಳೆದು, "ಹೋ, ಹೋ, ಹೋ, " ಎಂದು ಇಡೀ ಕೋಣೆ ಪ್ರತಿಧ್ವನಿಸುವಂತೆ ನಗಲಾ ರಂಭಿಸಿದರು. ಮತ್ತೆ ಅರೆ ಕ್ಷಣದಲ್ಲಿ ಅವನ ಸಮ ವಯಸ್ಸಿನ ಕೆಲವು ಗುಮಾಸ್ತರರನ್ನು ಹೆಸರು ಹಿಡಿದು ಕೂಗಿದರು ಅವರೆಲ್ಲ ಚಕಿತರಾಗಿ ಮೇಜಿನ ಬಳಿ ಬಂದು ಸುತ್ತುಗಟ್ಟಿ ನಿಂತಾಗ, ' ನೋಡಿದಿರಾ? ಕಳ್ಳ ಸಿಕ್ಕಿ ಬಿದ್ದ. ನನ್ನ ಹದ್ದಿನ ಕಣ್ಣಿಗೆ ಎಲ್ಲಿ ಬೀಳದೆ ಹೋಗುತ್ತದೆ ? ಇವರ ಜೇಬು ಗಳಿಗೆ ಕೈಹಾಕಿರಿ ! ತೆಗೆಯಿರಿ ! ಎಷ್ಟು ರೊಕ್ಕ ಇದೆ ನೋಡೋಣ " ಎಂದು ಗಂಭೀರವಾಗಿ ನುಡಿದರು. ಗುಮಾಸ್ತರರೆಲ್ಲ ದಿಕ್ಕುಗಾಣದೆ ಒಬ್ಬರ

ಮುಖವನ್ನೊಬ್ಬರು ನೋಡತೊಡಗಿದರು. ಕೆಲವರ ಕೈಕಾಲುಗಳು ನಡುಗಿದುವು. ಮೋರೆಗಳು ಬತ್ತಿದುವು.

" ತೆಗೆಯಿರಿ ! ತೆಗೆಯಿರಿ ! ನನಗೆ ಹೊತ್ತಿಲ್ಲ. ಬೇರೆ ಕೆಲಸವಿದೆ " ಎಂದು ಮತ್ತೆ ಮಾಸ್ತರರು ಆಜ್ಞಾಪಿಸಿದರು.

ಆದರೆ ಪುರುಷೋತ್ತಮನ ಜೇಬುಗಳಿಗೆ ಕೈ ತುರುಕಿಸಲು ಯಾರಿಗೂ ಧೈರ್ಯವಿಲ್ಲ.

ಪುರುಷೊತ್ತಮ ತಾನೇ ತನ್ನ ಜೇಬಿನೊಳಗೆ ಕೈ ತುರುಕಿಸಿ ಪಾಕೀಟನ್ನು ತೆಗೆದ. " ತನ್ನಿ. ಇಲ್ಲಿ ತನ್ನಿ " ಎಂದು ಮಾಸ್ತರರು ಕೈ ಚಾಚಿದರು. ಅದರಲ್ಲಿ ಹತ್ತು ಹತ್ತು ರೂಪಾಯಿಗಳ ನೋಟುಗಳೆರಡು ಮತ್ತು ಸ್ವಲ್ಪಚಿಲ್ಲರೆ ಕಾಸುಗಳಿದ್ದುವು ನೋಟುಗಳನ್ನು ಮೇಜಿನ ಮೇಲಿಟ್ಟು,ಚಿಲ್ಲರೆ ಕಾಸುಗಳನ್ನು ಪುನಃ ತುಂಬಿ ಮಾಸ್ತರರು, 'ನಾವು ಈ ಆಫೀಸಿನಲ್ಲಿ ಒಟ್ಟು ಎಷ್ಟು ಜನ ? " ಎಂದೊಬ್ಬನನ್ನು ಪ್ರಶ್ನಿಸಿದರು.

" ಸಾಧಾರಣ ಮುವತ್ತಾರಿರ ಬಹುದು ಸಾರ್ "

" ತಂತಿ ಖಾತೆಯನ್ನು ಹಿಡಿದಿರೋ ? "

" ಹೌದು "

" ಮತ್ತೆ ಪೋಸ್ಟ್ಮನ್ನರು ? "

" ಹುಂ, ಎಲ್ಲರೂ ಸೇರಿ "

ಮಾಸ್ತರರು ನಕ್ಕು ನುಡಿದರು. " ಈ ಹೊತ್ತು ಪುರುಷೋತ್ತಮರಾಯರ ಲೆಕ್ಕಕ್ಕೆ ಚಹಾ ಸಮಾರಂಭ ಆಗಲಿ ! ಅವರ ಖುತು ಶಾಂತಿಯಂತೆ! ನಮ್ಮ ಈ ಜೀವಗಳಿಗೆಲ್ಲ ಶಾಂತಿ ಆಗುವುದು ಬೇಡೇನು ? "

ಗುಮಾಸ್ತರರೆಲ್ಲ ಗೊಳ್ಳೆಂದು ನಕ್ಕರು. " ಕಳ್ಳ ಸಿಕ್ಕಿ ಬಿದ್ದ ! ಹುಡುಕಿರಿ ! ರೊಕ್ಕ ತೆಗೆಯಿರಿ ! " ಎಂದು ಗಂಭೀರವಾಗಿ ಹೇಳಿದಾಗ ಗಾಬರಿಗೊಂಡಿದ್ದ ಅವರ ಮೋರೆಗಳನ್ನೆಲ್ಲ ಈಗ ನೋಡುವಂತಿತ್ತು. ಒಬ್ಬ ಪುರುಷೋತ್ತಮನ ಬೆನ್ನು ಚಪ್ಪರಿಸಿದ. ಮತ್ತೊಬ್ಬ ಚಿವುಟಿದ. " ಇಷ್ಟು ಎಲ್ಲಿ ಸಾಕು ಸಾರ್ ? " ಎಂದು ಮತ್ತೊಬ್ಬ ಅಸಂತೃಪ್ತಿ ವ್ಯಕ್ತಪಡಿಸಿದ. " ಸಾರ್, ಧಾರವಾಡದ ಲೈನ್ ಬಜಾರ್ ಪೇಡೆ ಎಂದರೆ ಜಗತ್ಪ್ರಸಿದ್ಧ " ಎಂದ, ಬಲ್ಲವ.

ಮಾಸ್ತರರು ಹೇಳಿದರು. “ ಏ, ಈಗಲೇ ಅತಿ ಆಶೆ ಮಾಡಬೇಡಿರಿ ಶೋಭನವಾಗಿ ಒಂದು ವರುಷವಾದರೂ ಆಗಲಿ. ಹತ್ತು ತಿಂಗಳುಗಳಾದರೂ ಕನಿಷ್ಠ ಬೇಕಲ್ಲ ! ಆ ಮೇಲೆ ಪೇಢೆ ಕೇಳೋಣ. ಕೊಡದಿದ್ದರೆ ನಾವು ಬಿಟ್ಟೇವಲ್ಲವೇ ? ಜುಟ್ಟು ನನ್ನ ಕೈಯಲ್ಲೇ ಇದೆಯಲ್ಲ. ! ”

ಮಾಸ್ತರರ ಸರಸ ಸಲ್ಲಾಪ ಕೇಳಿ ಎಲ್ಲರೂ ಮಹೋಲ್ಲಾಸದಿಂದ ಅಗಲಿದರು.

ಪುರುಷೋತ್ತಮನು ಅಂದೇ ಗಾಡಿ ಹತ್ತಿದ. ಒಂದಕ್ಕೊಂದು ಹೊಂದಿಸಿದ ಕಬ್ಬಿಣದ ಕಂಬಿಗಳ ಸಂದುಗಳ ಮೇಲೆ ಗಾಲಿಗಳು ಉರುಳುವಾಗ. “ಧಾರ ವಾಡ ! ಧಾರವಾಡ ! ” ಎಂದೇ ಶಬ್ದವಾಗುತ್ತದೆಂದು ಅವನ ಭಾವನೆ ಗಾಡಿಯೂ ಬೇಗ ಓಡಲೊಲ್ಲದು ! “ ಇದು ಹಳೇ ಎಂಜಿನೋ ಏನೋ ! ಸರಿ ಎಳೆಯುವುದಿಲ್ಲ ” ಎಂದು ಯೋಚಿಸುತ್ತಾನೆ. ಡ್ರೈವರನನ್ನೂ ಶಪಿಸಿದ. ಡಬ್ಬಿಗಳನ್ನು ಎಳೆವ ರೇಲ್ವೆ ಇಂಜಿನಿಗಿಂತಲೂ ಹೆಚ್ಚು ವೇಗದಿಂದ ಅವನ ಮನಸ್ಸನ್ನು ಮೋಹನ ಶಕ್ತಿಯೊಂದು ಎಳೆಯುತ್ತಿದೆ. ಅವನ ಮನಸ್ಸಿನ ಬಟ್ಟಬಯಲಿನಲ್ಲಿ ಒಂದು ರೂಪ ಬಂದು ನಿಂತಿದೆ. ಡಬ್ಬಿಯಲ್ಲಿ ಅವನ ಮುಂದೆ, ಎಡಬಲಗಳಲ್ಲಿ ಅನೇಕ ಸ್ತ್ರೀಪುರುಷರಿದ್ದರೂ ಅವನಿಗೆ ಕಾಣಿಸದಂತಾಗಿರುವರು. ಒರಗಿ ಕಣ್ಣುಗಳನ್ನು ಅರೆಮುಚ್ಚಿಕೊಂಡಿದ್ದರೂ ಆ ಮೋಹನ ರೂಪ ಮತ್ತೆ ಮತ್ತೆ ಕಂಗೊಳಿಸುತ್ತದೆ. ಅದಿನ್ನೂ ಅಸ್ಪಷ್ಟ ಸಿಜ. ಆದರೆ ಗಾಡಿ ಒಂದೊಂದೇ ನಿಲ್ದಾಣಗಳನ್ನು ದಾಟಿದಂತೆ ಆ ಸುಂದರಾಕಾರದ ಸಾಕ್ಷಾತ್ಕಾರ ಹೆಚ್ಚು ಹೆಚ್ಚು ಆಗುತ್ತಲಿದೆ ಕುಸುಮವಿದ್ದ ಕಡೆ ಹಾರುವ ಮಧುವ್ರತದಂತೆ ಚಡಪಡಿಸುತಿದ್ದಾನೆ. ಕುಳಿತಲ್ಲಿ ಕುಳ್ಳಿರಲಾರ ಬಹಳ ಹೊತ್ತು ನಿಂತಿರಲಾರ. ಒಮ್ಮೆ ಕಿಟಕಿಯಿಂದ ಕತ್ತು ಹೊರಗಿಕ್ಕಿ ನೋಡುವನು. ಎಲ್ಲ ಹಚ್ಚ ಹಸುರು. ಗಿಡ ಮರಗಳಲ್ಲೂ ನಾನಾ ಬಣ್ಣದ ಹೂಗಳು ಅರಳಿವೆ. ಅವುಗಳ ಮಧ್ಯೆ ಕುಳಿತ ಯಾವುದೋ ಹಕ್ಕಿ ಕೂಗಿದಾಗ ಅವನ ಹೆಂಡತಿಯ ಹೆಸರನ್ನು ಉಚ್ಚರಿಸಿದಂತೆ ಅವನಿಗೆ ಕೇಳಿಸಿತು. ಹೌದೋ ಅಲ್ಲವೋ ಎಂದು ಪರಿಕಿಸುವ ಆತುರದಿಂದ ಮನಸ್ಸಿನಲ್ಲೇ ಹೆಂಡತಿಯ ಹೆಸರನ್ನು ಸ್ಮರಿಸಿದ .ಗಟ್ಟಿ ನುಡಿಯಲು ಸಂಕೋಚ. ಅವನೊಟ್ಟಿಗೆ ಕುಳಿತ ಪ್ರಯಾಣಿಕರಿಗೆ ಕೇಳಿಸುತ್ತದಲ್ಲ ! ಆದರೆ ಅವನೆಷ್ಟು ರಹಸ್ಯವಾ

ಗಿಟ್ಟಿಕೊಂಡರೂ ಗಾಳಿಗೆ ಗೊತ್ತಾಯಿತು. ಶ್ವಾಸೋಚ್ಛ್ವಾಸದ ಕಾಲಕ್ಕೆ ಅದು ಒಳಗೆ ನುಸುಳಿ ಮನಸ್ಸಿನ ಮೋರೆಯನ್ನು ಕಂಡುಬಂದಿದೆ. ಆದುದರಿಂದ "ಪ್ರೇಮ! ಪ್ರೇಮ" ಎಂದು ಅವನ ಕಿವಿಯಲ್ಲಿ ಪಿಸುಗುಟ್ಟಿದೆ. ಪುರುಷೋತ್ತಮ ಮೋಹಾಂಧನಾಗಿ ಹೋದ. ಕಾತರದ ಬಿಸಿಲಿನ ಉರಿಯಿಂದ ಪರಿತಪಿಸಿದ. "ಧಾರವಾಡಕ್ಕೆ ಇನ್ನೆಷ್ಟು ಸ್ಟೇಶನುಗಳಿವೆ? ಇನ್ನೂ ಯಾಕೆ ಬರಲಿಲ್ಲ? ಎಷ್ಟು ಗಂಟೆಗೆ ತಲಪುತ್ತದೆ?" ಎಂದು ಜಪಿಸಲಾರಂಭಿಸಿದ. ಗಾಡಿ ಮಧ್ಯರಾತ್ರಿ ಧಾರವಾಡ ಸೇರಿತು.

ಗಾಡಿಯಿಂದಿಳಿದು ಟಾಂಗಾ ಏರಲು ಅವನಿಗೆ ಕಷ್ಟವಾಗಿದೆ.ಪ್ರಯಾಣ ಕಾಲದಲ್ಲಿ ಅಲ್ಲಲ್ಲಿ ಹಣ್ಣು ಹಂಪಲು ಚಹಾ ಉಪ್ಪಿಟ್ಟು ಫಲಹಾರ ವಸ್ತುಗಳನ್ನಷ್ಟೇ ಸ್ವೀಕರಿಸಿದ್ದ. ಆದುದರಿಂದ ಹೊಟ್ಟೆ ಬಹುಮಟ್ಟಿಗೆ ಬರಿದು. ಮೋರೆಯೂ ಬಾಡಿದೆ. ಕೈಕಾಲುಗಳ ಬಲ ಉಡುಗಿದೆ. ಕುಳಿತು ಕುಳಿತು ಹೀಗಾಗಿದೆಯೋ ಅಥವಾ ಇದೂ ಪ್ರೇಮದ ಒಂದು ಪಕ್ಷವಾತ ರೋಗದ ಚಿಹ್ನೆಯೋ ಕತ್ತಲೆಯಲ್ಲಿ ಗೊತ್ತಾಗುವುದಿಲ್ಲ. ಅವನ ಕಣ್ಣಿಗೂ ನಿದ್ದೆಯು ಮಬ್ಬು. "ಕುದುರೆಗೂ ನಿದ್ದೆ ಬಂತೇನೋ? ಬೇಗನೇ ಹೊಡಿ. ಹೊಡಿ ಸುಖಸಾಗರ ಬಂಗಲೆ" ಎಂದು ಅವಸರ ಪಡಿಸಿದ. ತಾರ್ ರಸ್ತೆಯಲ್ಲಿ ಟಾಂಗಾ ತೀವ್ರಗತಿಯಿಂದ ಚಲಿಸಿತು. "ಹೇ ಭಾಯಿ, ಹೇ ಭಾಯಿ ಏ ಬಾಯಿ" ಎಂದು ಕಂಠಸ್ವರ ಎಬ್ಬಿಸುತ್ತ ಟಾಂಗಾವಾಲಾ ವೇಗವಾಗಿಯೇ ಹೊಡೆದ.ಪುರುಷೋತ್ತಮ ಮನೆಯ ಸಮೀಪ ಇಳಿದಾಗ ನುಡಿದ. "ಏ ಟಾಂಗಾವಾಲಾ,ರೇಲ್ವೆ ಗಾಡಿಗಿಂತ ಸಿನ್ನ ಟಾಂಗಾ ನಿಜವಾಗಿಯೂ ವೇಗವಾಗಿ ಓಡುತ್ತದೆ ನೋಡು. ರೇಲ್ವೆಯ ಒಂದು ಡಬ್ಬಿಗೆ ಈ ಕುದುರೆಯನ್ನು ಕಟ್ಟಿದರೆ ಒಳ್ಳೇದಾದೀತು"

ರಸ್ತೆಯ ಬದಿಯಲ್ಲಿ ಅವನ ಆಗಮನವನ್ನೇ ನಿರೀಕ್ಷಿಸಿ ಲಾಟಾನು ಹಿಡಿದು ನಿಂತಿದ್ದ ಅಕ್ಕ ಮತ್ತು ಭಾವ ಪುರುಷೋತ್ತಮನ ಮಾತು ಕೇಳಿ ನಗು ತಡೆಯದಾದರು. ಜೀವ ಬಹಳ ಚಡಪಡಿಸುತ್ತಿದೆಯಲ್ಲ? ಇನ್ನೇನು ಒಂದು ಹಗಲು ದಾಟಿದರೆ ಸರಿ" ಎಂದು ಅಕ್ಕನಕ್ಕಾಡಿದಳು. ಅವನು ಮುಗುಳು ನಗೆ ಬೀರಿದುದು ಕತ್ತಲೆಯಲ್ಲಿ ನಾಗವೇಣಿಗೆ ಕಾಣಿಸಲಿಲ್ಲ.

"ನೀನು ಮಧ್ಯಾಹ್ನದ ಗಾಡಿಗೆ ಬರುತ್ತೀ ಎಂದು ನಂಬಿದ್ದೆವು.

ಮಕ್ಕಳ ಒಂದು ದಂಡೇ ಹೋಗಿತ್ತು ಸ್ಟೇಶನಿಗೆ ನೀನು ಬಾರದಿದ್ದು. ದನ್ನು ಕಂಡು ಅಪ್ಪ ಅಮ್ಮ ಸ್ವಲ್ಪ ಗಾಬರಿಯೇ ಆದರು ”

“ ಅಪ್ಪ ಅಮ್ಮನಿಗಿಂತ ನಿನ್ನದೇ ಹೆಚ್ಚು ಬಿಡೇ. ಮುಚ್ಚಿಟ್ಟುಕೊಳ್ಳು ತಿದ್ದೀ ಯಾಕೆ ? ” ಎಂದು ಭಾವ ಕೂಡಿಸಿದ.

“ ಹೌದು. ಮತ್ತೆ ಗಾಡಿತಪ್ಪಿಹೋದರೆ ಎಂದು ಚಿಂತಿಸುತಿದ್ದೆ. ಅದು ತಪ್ಪೇನು ? ”

“ ತಪ್ಪು ಒಪ್ಪು ಹೇಳಿದ್ದಲ್ಲ ಪುಣ್ಯಾತ್ಗಿತ್ತಿ. ಅದಕ್ಕೆ ಅಷ್ಟೇಕೆ ಚಿಂತೆ ಎಂತ ? ಗಾಡಿತಪ್ಪಿದರೆ ಭಾವ ಸ್ಪೆಶ್ಯಲ್ ಮೋಟಾರ್ ಕಾರ್ ಮಾಡಿ ಕೊಂಡು ಬರುತಿದ್ದಿಲ್ಲೇನು ? ”

“ ಓಹೋ ಹೋ ಹಾಗೆ ! ” ಎಂದ ನಾಗವೇಣಿ ಗಂಡನ ಕೈ ಚಿವು ಟಿದಳು.

ಕೆಲವು ಹೆಜ್ಜೆಗಳನ್ನಿಕ್ಕುವ ವರೆಗೆ ಅವರೆಲ್ಲರೂ ಮೌನ. ದೂರದ ಲ್ಲೆಲ್ಲೋ ನಾಯಿಗಳು ಬೊಗಳುತಿದ್ದುವು. ಕಿರುದಾರಿಯ ಅಂಚಿನ ಮನೆ ಯಲ್ಲಿ,“ ಯ್ಯೇ ಯ್ಯೇ ” ಎಂದು ಕೂಸು ಅಳುತಿತ್ತು. “ಎಲ್ಲ ಶುಭಶಕುನ” ಎಂದು ನಾಗವೇಣಿ ಜೋತಿಷ್ಯವನ್ನು ನುಡಿದಳು.ಅವಳ ನಡಿಗೆ ಆನೆಯಂತಿ ದ್ದರೂ ನಾಲಿಗೆ ವೀಣಾತಾನದಂತೆ. ಮನೆಮುಟ್ಟುವವರೆಗೂ ಒಂದಲ್ಲ ಒಂದು ಸರಸೋಕ್ತಿಗಳಿಂದ ನಕ್ಕು ನಗಿಸಿದಳು.

ಮಕ್ಕಳ ದನಿಗುರುತಿಸಿ ಗೇಟಿನ ವರೆಗೆ ಬಂದಿದ್ದ ಗಂಗಮ್ಮನವರಿಗೆ ಕರುಳಿನ ಚಿಂತೆ. ಮಗನ ಮೋರೆ ಕಂಡೊಡನೆಯೇ ವ್ಯಾಕುಲದಿಂದ,“ಊಟ ಮಾಡಿದ್ದೀಯೋನೋ ? ” ಎಂದು ಪ್ರಶ್ನಿಸಿದರು. “ ಊಟ ಬೇಡ. ಮಧ್ಯ ರಾತ್ರಿಯಾಯಿತಲ್ಲ” ಎಂದು ಅವನು ನಿರಾಕರಿಸಿದರೂ ಅವರು ಬಿಡಲಿಲ್ಲ “ಸ್ವಲ್ಪ ತೆಗೋ ಬರಿ ಹೊಟ್ಟೆಯಲ್ಲಿ ಮಲಗಬಾರದು ಮದುಮಗ ” ಎಂದು ನಾಗವೇಣಿ ಒಯ್ಯಾರ ತೋರಿಸಿದಳು “ ಸ್ವಲ್ಪ. ಸ್ವಲ್ಪ. ಇನ್ನೂ ಸ್ವಲ್ಪ ” ಎಂದೆಂದು ದಿವ್ಯ ಬೋಜನ ಹೊಡೆದು ಪುರುಷೋತ್ತಮ ನಿದ್ದೆ ಹೋದ.

ಭೂಮಿತಾಯಿ ಹೊದೆದುಕೊಂಡ ಕರಿ ಕಂಬಳಿ ಜಾರಿದಾಗ ಬೆಳಕು ಹರಿದು ಬಂತು. ಮಂಗಲ ವಾದ್ಯಗಳು ಮೊಳಗಿದುವು. ಮಕ್ಕಳೆದ್ದು ಮನೆಗೆ ಒಕ್ಕಲಾದರು. ಅಕ್ಕ ನಾಗವೇಣಿ ಕಿಣಿ ಕಿಣಿ ಬಳೆಗಳನ್ನು ಅಲ್ಲಾಡಿಸುತ್ತ

ನಾಗನಂತೆ ಕುಣಿಯುತ್ತಿದ್ದಾಳೆ. ಅಂದವಾದ ಉಡುಗೆಗಳಿಂದ ಅಲಂಕೃತರಾಗಿ ಬಂಧುಗಳು, ಇಷ್ಟಮಿತ್ರರು, ಅತಿಥಿಗಳು, ಹೆಂಡತಿ ಮಕ್ಕಳೊಂದಿಗೆ ಆನಂದ ಮುಖದಿಂದ ಬರುತಿದ್ದಾರೆ. ಹೇಳಿದ ಹೊತ್ತಿಗೆ ಪುರೋಹಿತರೂ ತಪ್ಪಲಿಲ್ಲ. ಆಮೇಲೆ ಪುಣ್ಯಾರ್ಚನೆಗೂ ಆರಂಭ ನವದಂಪತಿಗಳನ್ನು ಕೈಹಿಡಿದು ಕರೆದುಕೊಂಡು ಬಂದು ಅಗ್ನಿಯ ಮುಂದೆ ಕುಳ್ಳಿರಿಸಿದ್ದಾರೆ.

ಗರಿಗಳೊಳಗೆ ಕೊಕ್ಕನ್ನು ತುರುಕಿಸಿಕೊಂಡ ಅರಗಿಳಿಯಂತೆ ಹುಡುಗಿ ಕುಳಿತಿರುವಳು. ಎಲ್ಲೆಡೆಗಳಲ್ಲೂ ಜರತಾರಿ ಸೀರೆಯ ರಾಶಿ. ಬೆನ್ನಿನ ಮೇಲೆ ಹೆಣೆದ ಜಡೆ. ಅದರ ತುತ್ತತುದಿಯಲ್ಲಿ ಜಡೆಗೊಂಡೆ. ಗೊಂಡೆಗಳು ನೆಲದ ಮೇಲೆ ಮೂಡಿದ ಗೊಂಡೆ ಹೂವುಗಳೋ ಏನೋ! ಮಲ್ಲಿಗೆಯ ದೊಡ್ಡ ಚೆಂಡು ಮುಡಿಯನ್ನಲಂಕರಿಸಿದೆ. ಒಂದು ಕಿವಿ, ಒಂದು ಕಪೋಲ, ಕುತ್ತಿಗೆಯ ಒಂದು ಪಾರ್ಶ್ವ ಮಾತ್ರ ಪುರುಷೋತ್ತಮನ ದೃಷ್ಟಿಗೆ ನಿಲುಕಿದೆ. ಸೀರೆಯಸೆರಗು ಜಾರಿದಾಗ ಸರಿಪಡಿಸಿಕೊಳ್ಳಲು ನುಸುಳಿದ ಕೈಬೆರಳುಗಳು ಒಮ್ಮೊಮ್ಮೆ ಕಾಣಿಸಿ ಮರೆಯಾದುವು. ಕಾಲಿನ ಪಾದ ಕಂಡಿತೋ ಇಲ್ಲವೋ ಎಂದಾಗ ಸೀರೆಯೊಳಗೆ ಸೆಳೆಯಲ್ಪಟ್ಟಿತು. ಕೈಗಳ ಬಳೆಗಳ ಸದ್ದು ಅವನ ಎದೆ ಗುಂಡಿಗೆಯ ರಕುತ ಬಡಿತವನ್ನು ಹೆಚ್ಚಿಸಿತು. ಮುಟ್ಟುವ ಸಂದರ್ಭ ದೊರಕಿದಾಗ ಗಟ್ಟಿಯಾಗಿ ಹಿಡಿಯಬೇಕೆಂದವನ ಆಸೆ.ಆದರೆ ಸ್ಪರ್ಶಿಸಿತೋ ಇಲ್ಲವೋ ವಿದ್ಯುಚ್ಛಕ್ತಿಯ ಆಘಾತದಂತೆ ಕೊಸರಿಕೊಂಡ. ಇದಿರಿಗಿದ್ದ ಅಗ್ನಿ ಪಂಚಾಗ್ನಿಯಾಗಿ ಅವನ ಪಂಚೇಂದ್ರಿಯಗಳನ್ನು ದಹಿಸತೊಡಗಿದೆ. ಹಬ್ಬುತ್ತಿರುವ ಹೊಗೆ ನಿಜವಾಗಿಯೂ ತನ್ನ ಮೂಗಿನ ಸೊಳ್ಳೆ, ಬಾಯಿ, ಕಣ್ಣುಗಳಿಂದ ಹೊರಹೊಮ್ಮುತ್ತಿದೆಯೇನೋ ಎಂದವನ ಗಾಬರಿ. ಸಹಿಸಲಾರ. ಏನು ಮಾಡಲೂ ಅರಿಯಲಾರ. ಮಂಗಳವಾದ್ಯ ಅವನಿಗೆ ಕರ್ಣಕರ್ಕಶ. ಬಾಲಬಾಲಿಕೆಯರ ಸೊಲ್ಲು ಗುಲ್ಲಾಗಿದೆ. ಮುತ್ತೈದೆಯರ ರಾಗ ದೊಡ್ಡ ರಗಳೆಯೇ. ಮಂತ್ರಗಳೊಂದೂ ಅರ್ಥವಾಗುವುದಿಲ್ಲ. ಉಡಿತುಂಬಿಸುವುದು, ಆರತಿ ಅಕ್ಷತೆ, ಉಡುಗೊರೆ ಎಲ್ಲ ಹಳೇ ಪದ್ಧತಿಗಳು! ಆಗಬೇಕಾದ ಸಂಪ್ರದಾಯಗಳಿಗೆಲ್ಲ ಶಿರಬಾಗಿ ಕತ್ತಲೆ ಪಸರಿಸುವ ವರೆಗೆ ಹಾಗೂ ಹೀಗೂ ಕಾಲಹರಣ ಮಾಡಿ,ತಮಗಾಗಿ ಅಟ್ಟದ ಮೇಲೆ ಅಣಿಗೊಳಿಸಿದ್ದ ಶಯ್ಯಾಗೃಹಕ್ಕೆ ಬಂದ.

ಶಯ್ಯಾಗೃಹ ವಿಶಾಲವಾಗಿದೆ. ಅದರ ಒಂದು ಮೂಲೆಯಲ್ಲಿ ಕಬ್ಬಿಣದ ಮಂಚ. ಮಂಗಳ ಮೃದುತರವಾದ ಗಾದಿಯನ್ನು ಹಾಸಿ ಅದನ್ನು ಅಚ್ಚ ಬಿಳಿ ಬಟ್ಟೆಯಿಂದ ಮುಚ್ಚಿರುವರು. ತಲೆಗಳನ್ನಿಡಲು ಎರಡು ತಲೆದಿಂಬುಗಳು. ಹೊದೆಯಲು ನುಣುಪಾದ ಎರಡು ರತ್ನಗಂಬಳಿ. ಸೊಳ್ಳೆಗಳ ಕಾಟ ತಡೆಯಲೆಂದು ಪರದೆಯನ್ನು ಇಳಿಬಿಟ್ಟಿರುವರು. ಮಂಚದ ಬಳಿ ಎಳೆದ ಮೇಜಿನ ಮೇಲೆ ದೊಡ್ಡ ನಿಲುವುಗನ್ನಡಿಯನ್ನು ಜೋಡಿಸಿ ಕೂಡಿಸಿರುವರು. ಬೆಳ್ಳಿಯ ಚುಚ್ಚುಕದಲ್ಲಿ ಅಲ್ಲಲ್ಲಿ ಊದಿನಕಡ್ಡಿಗಳನ್ನು ಚುಚ್ಚಿರುವರು ಪನ್ನೀರು ಪಾತ್ರೆ, ವೀಳೆಯದೆಲೆಯ ಡಬ್ಬಿಗಳು ಬೇರೆ. ಬೆಳ್ಳಿಯ ಮತ್ತೊಂದು ದೊಡ್ಡ ಹರಿವಾಣದಲ್ಲಿ ಕಸ್ತೂರಿ, ಪುಣುಗು, ಅತ್ತರ್ ಮೊದಲಾದ ಸುಗಂಧ ದ್ರವ್ಯಗಳಿಂದ ತುಂಬಿದ ಪಂಚಪಾತ್ರೆಗಳು. ಅದೇ ತಟ್ಟೆಯಲ್ಲಿ ಪರಿಪಕ್ವ ಫಲಗಳನ್ನಿಟ್ಟಿರುವರು. ಪಾನಕ್ಕಾಗಿ ಮಧುರ ಹಾಲು ಕೂಡಾ ಸಿದ್ಧವಿದೆ. ಕೋಣೆ ಗಮ ಗಮ ಪರಿಮಳದಿಂದ ತುಂಬಿದೆ. ಒಂದು ಕ್ಷಣ ಒಂದು ಯುಗವಾಗಿದೆ ಪುರುಷೋತ್ತಮನಿಗೆ.

ಅವನ ಹೆಂಡತಿ ಬಾಗಿಲಿಕ್ಕಿಕೊಂಡು ಮೋಡಗಳ ಮರೆಯಿಂದ ಬರುವ ಚಂದ್ರನಂತೆ ಬಾಗಿಲಿನ ಮುಂದೆ ಇಳಿಸಿದ್ದ ನೀಲ ಪರದೆಯನ್ನು ಸರಿಸಿ ನಿಂತಳು. ಹಾಸಿಗೆಯ ಬಳಿಯಲ್ಲಿ ಕಾಲುಗಳನ್ನು ಇಳಿಬಿಟ್ಟು ಪುರುಷೋತ್ತಮ ಕುಳಿತಿದ್ದ. ಕ್ರಾಪು ತಿದ್ದಿ ಕೊಂಡಿದ್ದ. ಮೊಗವು ತಾವರೆಯಷ್ಟು ಅಗಲವಾಗಿದೆ. ಬಣ್ಣವೂ ಅದರದೇ. ಕರಿ ಕಣ್ಣಾಲಿಗಳಲ್ಲಿ ಮಿಂಚು ಮಿನುಗುತ್ತಿದೆ. ಬಂಗಾರ ಬಣ್ಣದ ರೇಶ್ಮೆಯ ಉದ್ದತೋಳಿನ ಅಂಗಿಯನ್ನು ಧರಿಸಿದ್ದ. ಒಂದೆರಡು ಗೆರೆ ಜರಿ ಅಂಚಿನ ಧೋತರವನ್ನು ಬಂಗಾಲಿ ಬಾಬುವಿನಂತೆ ಉಟ್ಟುಕೊಂಡಿದ್ದಾನೆ. ತ್ವರಿತ ಸುಖಾತುರದಿಂದ ಮದನ ಮೋಹನ ಮೂರ್ತಿಯೇ ಕುಳಿತಂತಿದೆ.

ಅವಳ ಒಂದು ಬಳೆ ಅಲುಗಲಿಲ್ಲ; ಕಾಲಹೆಜ್ಜೆಯ ಸದ್ದಾಗಲಿಲ್ಲ; ಸೀರೆಯ ನಿರಿ ಮಿರಿ ಮಿರಿ ಮುರಿಯಲಿಲ್ಲ. ಗಾಳಿಯಲ್ಲಿ ತೇಲಿದಂತೆ ಬಂದು ಮಂಚದ ಬಳಿ ನಮಿತ ಮುಖಾಬ್ಜೆಯಾಗಿ ನಿಂತುಕೊಂಡಳು.

" ಕುಳಿತುಕೋ " ಎಂದ ಪುರುಷೋತ್ತಮ.

ಮಂಚದ ಒಂದು ಮೂಲೆಯಲ್ಲಿ ಹೂವಿನಂತೆ ಕುಳಿತಳು. ಏನೋ

ಧ್ಯಾನ. ಎತ್ತಲೋ ತದೃಷ್ಟಿ.

"ಏನು ಮಾತನಾಡಿಸುವುದಿಲ್ಲವೇ ?" ಅವನೇ ಮೊಲುದನಿ ತೆಗೆದ.

ಅವಳು ಮಾತನಾಡಲಿಲ್ಲ.

"ನಾನು ಸಾತಾರಕ್ಕೆ ತೆರಳಿದ ಮೇಲೆ ಪತ್ರಬರೆಯಲಿಲ್ಲವೆಂದು ನಿನಗೆ ಸಿಟ್ಟು ಬಂದಿತೇ? ಬರೆಯುತಿದ್ದೆ. ಬರೆಯಲು ತುಂಬಾ ಮನಸ್ಸಿತ್ತು ಬರೆದು ಬರೆದು ಇಟ್ಟುಕೊಂಡಿದ್ದೇನೆ. ಅಂಚೆಗೆ ಹಾಕಲಿಲ್ಲ. ಸ್ವಲ್ಪ ಲಜ್ಜೆಯಾಯ್ತು ನನಗೆ. ಮದುವೆಯಾಗಿ ಬಹಳ ದಿನಗಳಾಗಿಲ್ಲವಲ್ಲ ! ತಾಯಿ ತಂದೆಗೆ ಸ್ವಲ್ಪ ಸೋಜಿಗವಾದೀತೆಂದು ನೆನಸಿ ಬಿಟ್ಟೆ. ಕ್ಷಮಿಸು"

ಅವಳು ತನ್ನ ಎಡಗೈ ಬೆರಳುಗಳ ಎಡೆಗಳಲ್ಲಿ ಬಲಗೈ ಬೆರಳುಗಳನ್ನು ಹೆಣೆದು ಕೊಂಡಳು.

ಉತ್ತಮ ಸ್ವಲ್ಪ ಹತ್ತಿರ ಸರಿದು ನುಡಿದ. "ನಾನು ಸಾತಾರದಲ್ಲಿದ್ದರೂ ನನ್ನ ಪ್ರಾಣ ಇಲ್ಲೇ ಇತ್ತು. ನೀನೇ ನನ್ನ ಪಂಚಪ್ರಾಣ. ಜೀವನ ಸರ್ವಸ್ವ. ನಿನ್ನನ್ನು ಕಾಣಲು ಜೀವ ತಳಮಳಿಸುತ್ತಿತ್ತು. ಹಗಲು ಹೊತ್ತು ಹೋಗುತಿದ್ದಿಲ್ಲ. ರಾತ್ರಿ ಕಣ್ಣಿಗೆ ಜೊಂಪು ಹತ್ತುತಿದ್ದಿಲ್ಲ.ನೀನು ಮೋಹಿನಿ. ಮೋಹಿನಿಯೆಂದೇ ಕರೆಯುತ್ತೇನೆ. ಆಗದೇ ಹೇಳು"

"ಬೇಡ" ಎಂದಳಾಕೆ.

"ಯಾಕೆ ?"

"ನನ್ನ ಈಗಿನ ಹೆಸರಿಗೇನಾಗಿದೆ ?"

"ಏನಾಗಿಲ್ಲ. ಚೆನ್ನಾಗಿದೆ. ಆದರೆ ಮೋಹಿನಿ ಕೂಡಾ ಮುದ್ದಾದ ಹೆಸರಲ್ಲವೇ ?"

ಅವಳು ಸಿಟ್ಟುಸಿರಿಟ್ಟಳು.

ಅವಳಿಗಿಷ್ಟವಿಲ್ಲವೆಂದರಿತು ಉತ್ತಮ "ರೋಹಿಣೀ" ಎಂದು ಕರೆದ.

"ಏನು ?"

"ರೋಹಿಣಿ ಎಂಬ ಹೆಸರೇ ಸೊಗಸು. 'ಚಂದ್ರನಿಗೆ ರೋಹಿಣಿಯ ಮೇಲೆ ಬಹಳ ಮೋಹವಂತೆ. ನನಗೂ ಹಾಗೆಯೇ ಆಗಿದೆ. ನನ್ನ ಹೆಸರನ್ನು ಚಂದ್ರಮೋಹನನೆಂದು ಬದಲಾಯಿಸಲೇ ?"

ಉತ್ತಮ ಆ ಪ್ರಶ್ನೆ ಕೇಳಿದೊಡನೆಯೇ ರೋಹಿಣಿ ಹಾಸಿಗೆಯ ಅಂಚಿ

ನಿಂವ ಮಿಂಚಿನಂತೆದ್ದು ಕಿಟಕಿಯ ಕಡೆತೆರಳಿದಳು. ಕಿಟಕಿಯ ಪರದೆಯನ್ನು ಸರಿಸಿ ಹೊರಗೆ ಇಣಿಕಿದಳು. ಗಾಳಿ ರುಂ ರುಂ ಎಂದು ಅವಳ ಮೋರೆಗೆ ಬೀ ಬಡಿಯುತ್ತೋ ಏನೋ ! ತನ್ನ ಎರಡೂ ಕೈಗಳಿಂದ ಮೋರೆಯನ್ನು ಮುಚ್ಚಿ ಕೊಂಡಳು. ಉತ್ತಮ ಎದ್ದು ಬಂದ. ಕಾಲಹೆಜ್ಜೆಯ ಶಬ್ದ ಕೇಳಿಸಿದು ರಿಂದ ಅವನಿಗೆ ಕಾಣಿಸದಂತೆ ಸೆರಗಿನ ತುದಿಯಿಂದ ಕಣ್ಣು ಮೋರೆಗಳನ್ನೊ ಸಿಕೊಂಡಳು. ಉತ್ತಮ ಅವಳ ಬಳಿ ಬಂದು, "ರೋಹಿಣೀ, ಯಾಕೆ ಅ ಸರದಿಂದ ಎದ್ದು ಬಂದೆ ?" ಎಂದು ಕೇಳಿದ. ಅವಳು ಉತ್ತರ ಕೊಡ ಬೇಗನೇ ಹೊರಳಿ ಬಂದು ಸುಗಂಧದ್ರವ್ಯಗಳ ಬೆಳ್ಳಿಯ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡಳು.

ಉತ್ತಮ ಪುನಃ ಹಾಸಿಗೆಯಲ್ಲಿ ಕುಳಿತ. ಅವನ ಕಾಲಪಾದಗಳು ನೆಲ ಮೇಲೆ ಹಾಸಿದ್ದ ಜಮಖಾನೆಯ ಮೇಲಿದ್ದುವು. ರೋಹಿಣಿ ಪನ್ನೀ ಚಿಂಮಿಸಿದಳು. ಮುಂಗೈಗೆ ಅಂಗಿಗೆ ಪರಿಮಳ ದ್ರವ್ಯಗಳನ್ನು ಪೂಸಿದ ಕುಡಿಯಲು ಹಾಲನ್ನು ಕೊಟ್ಟಳು. ವೀಳೆಯದೆಲೆಯನ್ನು ಅರ್ಪಿಸಿದಾ ಉತ್ತಮ ಅವಳ ಬಲಗೈಯನ್ನು ಹಿಡಿದ. ಅದು ಹಿಮಶೀತಲವಾಗಿತ್ತು ಅವಳು ಬಿಗಿಯಾಗಿ ಹಿಡಿಯಲೂ ಇಲ್ಲ. ಬಿಡಿಸಿಕೊಳ್ಳಲೂ ಇಲ್ಲ. ಉತ್ತಮ ನಿಗೇ ಆಶ್ಚರ್ಯವಾಗಿ ಬಿಟ್ಟು ಬಿಟ್ಟ. ಹಾಸಿಗೆಯ ಮೇಲೆ ಮಲಗಲು ಕಾ ಗಳನ್ನೆತ್ತಿಕೊಳ್ಳಲು ಅವನು ಯತ್ನಿಸಿದಾಗ ರೋಹಿಣಿ ಪಾದಗಳ ಮೇ ಮಸ್ತಕವನ್ನಿಟ್ಟು ನಮಸ್ಕರಿಸಿದಳು. ಅವನು ಕೊಸರಿಕೊಳ್ಳಲಿಲ್ಲ. ಬಿ ನೀರಿನ ಕೆಲವು ಹನಿಗಳೂ ಅವನ ಕೋಮಲವಾದ ಪಾದಗಳ ಮೇ ಉದುರಿದಂತಾಯಿತು. ಉತ್ತಮ ಬಗ್ಗಿ "ರೋಹಿಣೀ, ರೋಹಿಣೀ, ರೋಹಿಣೀ ಎಂದೆಂದು ಅವಳ ಎರಡೂ ತೋಳುಗಳನ್ನು ಹಿಡಿದು ಎತ್ತಿದ.

ಅವಳ ಕಾಯ ಕಂಪಿಸುತಿತ್ತು.

ರೋಹಿಣಿ ಬಿಕ್ಕಿ ಬಿಕ್ಕಿ ಅಳುತಿದ್ದಳು.

ಉತ್ತಮ ಎಡಗೈಯಲ್ಲಿ ಅವಳನ್ನು ಆದರಿಸಿಕೊಂಡು ಬಲಗೈಯಿಂ ಅವಳ ಗಲ್ಲವನ್ನೆತ್ತಿದ. ಮುಚ್ಚಿದ್ದ ಕಣ್ಣುಗಳಿಂದ ಧಾರಾಕಾರವಾ ಕಣ್ಣೀರು ಹರಿಯುತಿತ್ತು. ತನ್ನ ಹೃದಯದಿಂದಲೇ ಕೆನ್ನೀರು ಹರಿ ತೊಡಗಿದೆಯೆಂಬ ಭ್ರಮೆ ಉತ್ತಮನಿಗೆ. ಹಾಸಿಗೆಯಲ್ಲಿ ಅವಳನ್ನು ಕು

ರಿಸಿ ಬೆಪ್ಪು ಬೆರಗಾಗಿ ಕೇಳಿದ. "ರೋಹಿಣೀ, ರೋಹಿಣೀ ನಿನಗೇನಾಗಿದೆ? ಯಾಕೆ ಅಳುತ್ತಿದ್ದೀ ? "

ರೋಹಿಣಿ ಬಿಸುಸುಯ್ಯುತ್ತಿದ್ದಳು.

ಉತ್ತಮ ಅವಳ ಮೈದಡವಿ, ಮುಂತಲೆಯ ಎಳೆಗೂದಲುಗಳನ್ನು ನೇವರಿಸುತ್ತ ಸಂತೈಸಿದ."ರೋಹಿಣೀ, ರೋಹಿಣೀ, ಕಣ್ಣುತೆರೆ.ನನ್ನೊಡನೆ ಮಾತನಾಡು, ನೋಡು." ಅವನು ಅವಳ ಮೋರೆಯ ಮೇಲೂ ಕೈ ಆಡಿಸಿದುದರಿಂದ ರೋಹಿಣಿ ಕಣ್ಣೆವೆಗಳನ್ನು ತೆರೆದಳು. ನೆಟ್ಟ ದೀನ ದೃಷ್ಟಿಯಿಂದ ಉತ್ತಮ ಮತ್ತೆ ಕೇಳಿದ. " ಏಕೆ? ನಿನ್ನ ಮೈ ಚೆನ್ನಾಗಿಲ್ಲವೇನು? "

" ಇಲ್ಲ "

" ಆಗಲೇ ಹೇಳಬಹುದಿತ್ತಲ್ಲ ನೀನು. ಅದಕ್ಕೆ ಅಳಬೇಕೇನೇ? "

" ಭಯವಾಯಿತು. "

" ಹೌದು. ಸಹಜ. ನಾನು ಹುಲಿ ಸಿಂಹಗಳಂತೆ ನಿನ್ನ ಕಣ್ಣಿಗೆ ಕಾಣಿಸಿದೆನೋ ಏನೋ ! "

"ಹುಲಿ ಸಿಂಹಗಳ ಸ್ವರೂಪಗಳಿಂದಲೇ ಅವುಗಳ ಸ್ವಭಾವ ವ್ಯಕ್ತವಾಗುತ್ತದೆ. ಆಗಾಗ ಬದಲಾಗುವುದೂ ಇಲ್ಲ. ಆದರೆ, ಮನುಷ್ಯರು ಹಾಗಿರುವುದಿಲ್ಲವಲ್ಲ. "

ಉತ್ತಮ ವಿಸ್ಮಿತನಾದ.

ರೋಹಿಣಿ ಮಾತು ಕೂಡಿಸಿದಳು. " ಮನುಷ್ಯರು ಮಕ್ಕಳಿಗೆ ಬಹುಮುದ್ದಾದ ಹೆಸರನ್ನಿಡುವರು. ಅವು ಅರ್ಥಗರ್ಭಿತವಾಗಿಯೂ ಇರುತ್ತವೆ. ಆದರೆ ಹೆಸರುಗಳಿದ್ದಂತೆ ಅವರ ಗುಣಗಳೂ ಇವೆಯೆಂದು ನಿರ್ಣಯಿಸಲಾದೀತೇ ? "

" ಒರೆಗಲ್ಲಿಗೆ ಹಚ್ಚುವ ವರೆಗೆ ನಿರ್ಣಯಿಸಲು ಸಾಧ್ಯವಿಲ್ಲ. " ಎಂದ ಉತ್ತಮ ಹಾಸಿಗೆಯ ಒಂದು ಬದಿಗೆ ಸರಿದು ಮಲಗಿ, ರತ್ನಗಂಬಳಿಯನ್ನು ಎದೆಯ ವರೆಗೂ ಎಳೆದುಕೊಂಡ. ರೋಹಿಣಿ ಚಂದನದ ಬೊಂಬೆಯಂತೆಯೇ ಕುಳಿತಿದ್ದಳು. ಕೆಲವು ನಿಮಿಷಗಳ ಮೇಲೆ ಉತ್ತಮ ಕೇಳಿದ. " ರೋಹಿಣೀ, ನೀನು ಎಲ್ಲಿಯ ವರೆಗೆ ಓದಿದ್ದೀಯಾ ? "

"ನಿಮಗೆ ಗೊತ್ತಿಲ್ಲವೇ?"ಎಂದು ಅವಳು ಮರುಪ್ರಶ್ನೆಯನ್ನೇ ಹಾಕಿದಳು.

" ಹುಂ. ಸ್ವಲ್ಪ ಗೊತ್ತಿದೆ. ಎಸ್. ಎಸ್. ಎಲ್. ಸಿ ವರೆಗೆ ಕಲಿತಿರುವಿಯೆಂದು ತಂದೆಯವರು ಹೇಳಿದ್ದ ನೆನಪಿದೆ.ಆದರೆ ಪಾಸಾಗಿದ್ದೀಯೋ. ಇಲ್ಲವೋ ಗೊತ್ತಿಲ್ಲ"ಎಂದು ಉತ್ತರಿಸಿದ ಉತ್ತಮ ಮೋರೆಯ ಮೇಲೂ ಮುಸುಕನ್ನು ಎಳೆದುಕೊಂಡು ಮತ್ತೆ ನುಡಿದ. " ಆಗಲಿ. ಈಗ ಮಲಗಿಕೋ. ರಾತ್ರಿ ಬಹಳವಾಯ್ತು. ನಿನಗೆ ಆರಾಮವಿಲ್ಲ. "

ರೋಹಿಣಿ " ಹಾಂ, ಹೂಂ " ಅನಲಿಲ್ಲ. ಉತ್ತಮ ಮುಸುಕು ಹಾಕಿಕೊಂಡಿದ್ದುದರಿಂದ ಅವಳು ತಲೆ ಅಲ್ಲಾಡಿಸಿದ್ದರೂ ಅದು ಕಾಣುವಂತಿರಲಿಲ್ಲ. ಇದು ಮಾತ್ರ ನಿಜ—ಉತ್ತಮನಿಗೆ ಬಹಳ ಹೊತ್ತಿನ ವರೆಗೆ ನಿದ್ದೆ ಬರಲಿಲ್ಲ. ಅವನು ವಿಚಾರ ಮಗ್ನನಾಗಿದ್ದ. ಮತ್ತು ಅವನಿಗೆ ಎಚ್ಚರಿಕೆ ಇರುವ ವರೆಗೂ ರೋಹಿಣಿ ಹಾಸಿಗೆಯಲ್ಲಿ ಅವನ ಪಕ್ಕದಲ್ಲಿ ಬಂದು ಮಲಗಿರಲಿಲ್ಲ.

ಅವನಿಗೆ ಎಚ್ಚರವಾಯಿತು. ಏನೋ ದುಸ್ವಪ್ನಗಳು ಬಿದ್ದಿವೆ ಒಂದೂ ಅರ್ಥವಾಗಲೊಲ್ಲದು. ತುಂಬಾ ಗಾಬರಿಯಾಗಿದ್ದಾನೆ. ತಾನು ಎಲ್ಲಿರುವೆನೆಂಬ ನಿಜ ಕಲ್ಪನೆ ಕೂಡಾ ಇಲ್ಲ. ಸಾತಾರದಲ್ಲಿದ್ದೇನೆಂಬ ಭಾವನೆ ಮೊದಲು ಮಿಂಚಿತು. ಪರಿಮಳ ದ್ರವ್ಯಗಳ ಸುವಾಸನೆ ಮೂಗಿಗೆ ಬಡಿದುದರಿಂದ ಮತ್ತೆ ಊರು, ಮನೆ, ಕೋಣೆ, ನೆನಪಾದುವು. ರೋಹಿಣಿಯನ್ನೂ ನೆನೆಸಿಕೊಂಡ. ಕತ್ತಲೆ ಪಸರಿಸಿದ್ದುದರಿಂದ ಅವಳು ಕಾಣಿಸಲೊಲ್ಲಳು ಹಾಸಿಗೆಯ ಮೇಲೆ ಅತ್ತಿತ್ತ ಕೈಚಾಚಿ ಮುಟ್ಟಿದ. ಅವಳಿಲ್ಲ. ರೋಹಿಣಿಯಿಲ್ಲ. ! ಉತ್ತಮನ ಕೈಕಾಲುಗಳು ತಣ್ಣಗಾದುವು. ಮೆಲ್ಲನೆದ್ದು ಬಂದು ವಿದ್ಯುಚ್ಛಕ್ತಿಯ ಸ್ವಿಚ್ ಒತ್ತಿದ. ರೋಹಿಣಿ ಕೆಳಗೆ ಜಮಖಾನೆಯ ಮೇಲೆ ಮಲಗಿದ್ದಳು. ರತ್ನಗಂಬಳಿಯನ್ನು ಹೊದೆದುಕೊಂಡಿದ್ದಳು. ಮೋರೆಗೆ ಮುಸುಕಿಲ್ಲ. ಉತ್ತಮ ಬಂದು ಬಗ್ಗಿ ನೋಡಿದ. ಮೊಗ ಬಾಡಿದೆ. ಅಧರವೆಲ್ಲ ಆರಿದೆ. ಕಣ್ಣೀರಿನಿಂದ ತೊಯ್ದು ಮುಂದಲೆಯ ಗುಂಗುರು ಕೂದಲಿನ ಕೆಲವು ಎಳೆಗಳು ಕಪೋಲಕ್ಕೆ ಅಂಟಿಕೊಂಡಿವೆ. ಅವಳನ್ನೆಬ್ಬಿಸಲು ಉತ್ತಮ ಬಲಗೈ ಚಾಚಿದ. ಆದರೆ ಅದು ಅರ್ಧದಲ್ಲೇ ನಿಂತಿತು. " ರೋಹಿಣೀ " ಎಂದು ಕರೆಯಲೆತ್ನಿಸಿದ. ನಾಲಿಗೆಯೂ ಬರಲಿಲ್ಲ. ಮರಳಿ, ವಿದ್ಯುಚ್ಛಕ್ತಿಯ ದೀಪವನ್ನು ಆರಿಸಿ, ಒಂದು ಕೈಯಲ್ಲಿ ಎದೆಯನ್ನೂ ಇನ್ನೊಂದರಲ್ಲಿ ಹಣೆ

ಯನ್ನೂ ಒತ್ತಿಕೊಂಡು ಹಾಸಿಗೆಯಲ್ಲಿ ಉರುಳಿ ಹೊರಳಿದ. ಉತ್ತಮನಿಗೆ ಹೃದಯ ವಿಕಾರವಾಯಿತೋ ಏನೋ!

## ಮೂರನೆಯ ಅಧ್ಯಾಯ

ಮುಂಜಾನೆ ಮನೆಯಲ್ಲಿ ಗದ್ದಲವೇ ಗದ್ದಲ. ನಾರಾಯಣರಾಯರ ದೊಡ್ಡ ಸ್ವರ ಮನೆಯ ಮೂಲೆ ಮೂಲೆಗೂ ಕೇಳಿಸುತಿತ್ತು. ಅಂಗಳದಲ್ಲಿ ನಿಂತು ಅವರು ಮಕ್ಕಳ ಹೆಸರು ಹೇಳಿ ಕೂಗುತಿದ್ದರು. ತನ್ನ ಮಕ್ಕಳ ಹೆಸರನ್ನೂ ಕರೆದಂತೆ ಕೇಳಿಸಿತು ನಾಗವೇಣಿಗೆ. ಆದುದರಿಂದ ಅವಳು ಕೆಲಸ ಬೊಗಸೆಗಳನ್ನು ಅಲ್ಲಿಂದಲ್ಲೇ ಬಿಟ್ಟು ಜಗಲಿಗೆ ಓಡಿ ಬಂದಳು. ನಾರಾಯಣರಾಯರು ಕಾಶ್ಮೀರಿ ಶಾಲೊಂದನ್ನು ಹೊದ್ದುಕೊಂಡಿದ್ದರು. ಕೈಯಲ್ಲಿ ಹಲ್ಲುಜ್ಜುವ ಮೊಳ ಉದ್ದದ ಬೇವಿನ ದಂಟು. ಆ ದಂಟನ್ನೇ ಬೆತ್ತದಂತೆ ಬೀಸುತ್ತಾ ಮಗಳ ಮುಖ ನೋಡಿ ನುಡಿದರು. " ನೋಡಿದೆಯಾ ನಾಗ ಈ ಮಕ್ಕಳ ತುಂಟತನ. ? ಈ ಗುಲಾಬಿ ಗಿಡವನ್ನು ಎಳೆದು ಸೆಳೆದಿದ್ದಾರೆ. ಹೂವಿನ ಕುಡಿಕೆಗಳನ್ನೂ ಒಡೆದಿರುವರು. ನೆಲದಲ್ಲಿ ನೆಟ್ಟ ಸಸಿಗಳನ್ನು ಹರಿದು ಹರಿದು ಎಸೆದರುವರು. ಆ ಹುಡುಗಿ ಎಷ್ಟು ಕಷ್ಟಪಟ್ಟು ಬೆಳೆಸಿದೆ ! ಬಾವಿ ಇದೆ ಪಾತಾಳದಲ್ಲಿ! ಹಾಗಿದ್ದರೂ ತಾನೇ ಸ್ವತಃ ನೀರೆಳೆದು ಎರೆದಿರುವಳು. ಇದನ್ನು ನೋಡಿದರೆ ಅವಳ ಎದೆಯೇ ಒಡೆದೀತು. ಇದು ಯಾರ ಕಿಡಿಗೇಡಿತನವೆಂದು ನನಗೆ ಗೊತ್ತಾಗಬೇಕಾಗಿದೆ "

" ನೀ ಮಾಡಿದೆಯೇನೋ ? ನಿನ್ನದು ಕೆಲ್ಸ ಇದೇನೋ ? " ಎಂದು ನಾಗವೇಣಿ ಅಲ್ಲಿ ನಿಂತಿದ್ದ ಮಕ್ಕಳ ಮೋರೆ ಮೋರೆ ನೋಡಿ ಪ್ರಶ್ನಿಸಿದಳು. ಒಬ್ಬರೂ ಉಸಿರೆತ್ತಲಿಲ್ಲ.

" ನಾಗಾ, ಹಾಗೆ ಕೇಳಿದರೆ ಯಾರಾದರೂ ಒಪ್ಪಿಕೋತಾರೇನು ? ಎಲ್ಲರನ್ನೂ ಸಾಲಾಗಿ ನಿಲ್ಲಿಸು. " ಎಂದು ಆಜ್ಞಾಪಿಸಿದರು ತಂದೆ.

" ಸಾಲಾಗಿ ನಿಲ್ಲಿರಿ. ನಿಲ್ಲಿರಿ '' ಎಂದೆನ್ನುತ್ತ ನಾಗವೇಣಿ ಮಕ್ಕಳ ಕೈ ಹಿಡಿದು ಎಳೆದೆಳೆದು ನಿಲ್ಲಿಸಿದಳು.

ನಾರಾಯಣರಾಯರು ಔಡುಗಚ್ಚಿ, ಕಣ್ಣು ರಕ್ತಿಸಿ, ಬೇವಿನ ದಂಟಿ ನಿಂದಲೇ ಗಾಳಿಗೆ ಹೊಡೆಯುತ್ತ ಕೇಳಿದರು. " ಏ, ಗುಲಾಬಿ ಗಿಡ ಕಿತ್ತ ವರು ಯಾರು ? ಸತ್ಯ ಹೇಳಿ. ನಿಮಗೆ ಆಟ ಆಡಲು ಇಷ್ಟು ವಿಶಾಲವಾದ ಮನೆಯಿದೆ; ವಠಾರವಿದೆ. ಅವುಗಳನ್ನೆಲ್ಲ ಬಿಟ್ಟು ಹೂವಿನ ಗಿಡಗಳಿಗೇ ಗಂಟು ಬಿದ್ದಿರಾ? ನಿಮಗೆ ಕಲಿಸುತ್ತೇನೆ ಬುದ್ಧಿ! ಯಾರು ಹೇಳಿ. ಸತ್ಯಹೇಳಿ"

ಆದರೆ ತಗ್ಗಿಸಿದ್ದ ತಲೆಗಳನ್ನು ಒಬ್ಬರೂ ಮೇಲೆತ್ತಲಿಲ್ಲ. ನಾಗವೇಣಿಯ ಮಕ್ಕಳು ತಾಯಿಯ ಕಡೆಗೇ ನೋಡುತಿದ್ದವು. "ನಿಮ್ಮ ತುಂಟತನಕ್ಕೆ ಆಗಬೇಕು ಯೋಗ್ಯ ಶಾಂತಿ" ಎಂದು ಹೇಳುವವರ ಹಾಗೆ ನಾಗವೇಣಿ ತೋರು ಬೆರಳಿನಿಂದ ಬೆದರಿಕೆ ಹಾಕುತಿದ್ದಳು. ಮತ್ತೆ ತಂದೆಯ ಕಡೆ ಹೊರಳಿ ನುಡಿದಳು. " ಅಪ್ಪಾ ಎರಡೆರಡು ಏಟು ಬಿದ್ದರೆ ಬಾಯಿ ಬಿಚ್ಚಿಯಾರು. ಗಾಳಿಗುದ್ದಿದಂತೆ ಕೋಲು ಬೀಸಿದರೆ ಬಿಸಿಯಾದಂತಾಯಿತೇ ? "

' ಬಿಸಿ ಮಾಡುತ್ತೇನೆ. ತಡಿ. ಮೋರೆಗೆ ನೀರು ಹಾಕಿಕೊಂಡು ಬರುತ್ತೇನೆ " ಎಂದ ನಾರಾಯಣರಾಯರು ಮನೆಯ ಹಿಂಬದಿ ಕಟ್ಟಿದ್ದ ಬಿಸಿ ನೀರಿನ ಕೊಟ್ಟಿಗೆಗೆ ತೆರಳಿದರು. ಮೋರೆ ತೊಳೆಯುತಿದ್ದ ಸೊಸೆಯನ್ನು ಕಂಡು " ಮಗೂ ನಿನ್ನ ಹೂವಿನ ಬಾನಿಗಳೆಲ್ಲ ಏನಾಗಿವೆ ನೋಡಿದೆಯಾ ಮಕ್ಕಳೆಲ್ಲ ಚೆಲ್ಲಾಟವಾಡಿವೆ. " ಎಂದು ತಿಳಿಸಿದರು. ರೋಹಿಣಿ ಸೆರಗಿನ ತುದಿಯಿಂದಲೇ ಮೋರೆಯನ್ನೊರಸಿಕೊಂಡು ಜಗಲಿಗೆ ಬಂದಳು. ಸೈನಿಕರಂತೆ ಹುಡುಗರನ್ನೂ ಹುಡುಗಿಯರನ್ನೂ ಸಾಲಾಗಿ ನಿಲ್ಲಿಸಿದ್ದರು. ನಾಗವೇಣಿ ಬಿರುಸು ಧ್ವನಿಯಲ್ಲಿ ಗದರಿಸುತಿದ್ದಾಳೆ. ತನ್ನ ಮಕ್ಕಳಿಗೆ ಒಂದೊಂದು ಏಟು ಹಾಕಿಯೂ ಆಗಿದೆ. ಅವು ಅಳುತ್ತಿವೆ. ರೋಹಿಣಿ ಒಂದನ್ನು ತಬ್ಬಿಕೊಂಡು ಹೇಳಿದಳು, " ಅಕ್ಕಾ, ಗಿಡಗಳನ್ನು ಕಿತ್ತಿದ್ದರೆ ಮತ್ತೆ ನೆಟ್ಟು ಬೆಳೆಸಲಿಕ್ಕಾಗುವದಿಲ್ಲವೇ ? ಮಡಿಕೆ ಒಡೆದರೆ ಹೊಸ ಮಡಿಕೆಗಳನ್ನು ತರಿಸೋಣ ತುಂಟತನ ಮಕ್ಕಳ ಸ್ವಭಾವ. "

" ಹೌದು ಮಕ್ಕಳ ಸ್ವಭಾವ. ಆದರೆ ಅಪ್ಪ ಕೇಳಿದರೆ, ನಾನು ಮಾಡಿದ್ದೇನೆಂತ ಒಬ್ಬರೂ ಒಪ್ಪಿಕೊಳ್ಳುವುದಿಲ್ಲ. ನೋಡು. "

' ಭಯ ಅವರಿಗೆ. ಸತ್ಯ ಹೇಳಿದರೆ ಬೆನ್ನಿಗೆ ಬೀಳುತ್ತದಲ್ಲ. "

' ಹೇಳದೇ ಇದ್ದರೆ ಬೀಳುವುದಿಲ್ಲವೇನು ? ಈ ಕಪಾಳಕ್ಕೊಂದು ಆ

ಕಪಾಳಕ್ಕೊಂದು ಪಟ ಪಟ ಬಿದ್ದರೆ ಗೊತ್ತಾಗುತ್ತದೆ. ಆಗ ಬಾಯಿ ಬಿಚ್ಚುತ್ತಾರೆ ''

" ಬಾಯಿ ಬಿಚ್ಚಿಸಲು ಕಪಾಳಕ್ಕೇ ಕೊಡಬೇಕಾಗಿಲ್ಲ " ಎಂದ ರೋಹಿಣಿ ಮಕ್ಕಳ ಕಡೆ ನೋಡಿ ನಕ್ಕಳು. ಅವರ ಹೆಸರು ಹಿಡಿದು ಕರೆದು " ಸತ್ಯ ಹೇಳಿದವರಿಗೆ ಒಂದೊಂದು ಉಂಡೆ ಕೊಡುತ್ತೇನೆ. ಯಾರು ಮಡಿಕೆ ಒಡೆದವರು. ಹೇಳಿ? ಹೇಳಿದರೆ ಉಂಡೆ. ಇಲ್ಲದಿದ್ದರೆ ಮೋಸವೇ '' ಎಂದು ಆಶೆ ತೋರಿಸಿದಳು. ಆಗ ಒಬ್ಬೊಬ್ಬರೇ ಬಾಯಿ ಬಿಚ್ಚಿದರು. ನಾಗ ವೇಣಿಗೆ ಸ್ವಲ್ಪ ಲಜ್ಜೆಯೂ ಆದುದರಿಂದ ಅವಳು ಅಡಿಗೆ ಮನೆಗೆ ನಡೆದಳು ಮಕ್ಕಳೆಲ್ಲ " ನನಗೆ ಉಂಡೆ. ನನಗೆ ಉಂಡೆ " ಎಂದು ರೋಹಿಣಿಯನ್ನು ಸುತ್ತುಗಟ್ಟಿ, ಕುಣಿದುವು. ಒಂದೊಂದು ಅವಳ ಒಂದೊಂದು ಕಾಲುಗಳಿಗೆ ತನ್ನ ತೋಳುಗಳನ್ನು ಸುತ್ತಿದುವು. ರೋಹಿಣಿ ಎತ್ತಿಕೊಂಡಿದ್ದ ನಾಗ ವೇಣಿಯ ಒಂದು ವರುಷದ ಮಗುಕೂಡಾ, " ಮಾವಿ, ನಣಗೂ ಉಂದೆ" ಎಂದು ಹೇಳಿ ಅವಳ ಗಲ್ಲವನ್ನು ತೀಡುತಿತ್ತು. ಎಲ್ಲರನ್ನೂ ಕರೆದುಕೊಂಡು ಅಡಿಗೆ ಮನೆಗೆ ಬಂದಳು. ಗಂಗಮ್ಮನವರು ಎರಡನೇ ಸಲ ಎಲ್ಲರಿಗೂ ಚಹಾ ಟಿಫಿನ್‌ಗಳ ಸಿದ್ಧತೆಯಲ್ಲಿದ್ದರು. ಉಂಡೆ ಕೊಡುತ್ತೇನೆಂದು ನಾದಿನಿ ಹೇಳಿ ಬಾಯಿ ಬಿಡಿಸಿದ್ದ ವೃತ್ತಾಂತ ನಾಗವೇಣಿಯ ಮುಖಾಂತರ ಅವರಿಗೆ ಮೊದಲೇ ಗೊತ್ತಾಗಿತ್ತು. ಆದುದರಿಂದ ರೋಹಿಣಿ ಮಕ್ಕಳನ್ನೆಲ್ಲ ಕಟ್ಟಿ ಕೊಂಡು ಬಂದಾಗ, " ಅಕೋ ಅದರಲ್ಲಿವೆ. ನಾನು ಮುಟ್ಟುವುದಿಲ್ಲ. ನೀನೇ ಕೊಡು"ಎಂದು ದೊಡ್ಡ ಬುಟ್ಟಿಯನ್ನು ತೋರಿಸಿದರು. "ನನಗೆ ದೊಡ್ಡದು ನನಗೆ ದೊಡ್ಡದು. ನನಗೆ ಎಡಡು ಉಂದೆ " ಎಂದು ಮಕ್ಕಳು ರೋಹಿಣಿ ಯನ್ನು ಮುತ್ತಿ ನಲಿದಾಡಿದುವು. " ಸಣ್ಣವರಿಗೆ ಸ್ವಲ್ಪ ಕೊಡಮ್ಮಾ. ಹೊಟ್ಟೆ ಕೆಟ್ಟೀತು. ನಿನ್ನೆ ಮೊನ್ನೆಯಿಂದ ಅವು ತಿಂದುದಕ್ಕೆ ಅಳತೆಯಿಲ್ಲ " ಎಂದು ಅತ್ತೆ ತಿಳಿಸಿದರು.

ನಾರಾಯಣರಾಯರು ಹಲ್ಲು ಮೋರೆಗಳಿಗೆ ನೀರು ಹಾಕಿಕೊಂಡು ಬಂದಾಗ ಜಗಲಿಯಲ್ಲಿ ಒಬ್ಬ ಹುಡುಗನೂ ಇದ್ದಿರಲಿಲ್ಲ. "ನಾಗ. ನಾಗ '' ಎಂದು ಕರೆಯುತ್ತ ಅವರು ಅಡಿಗೆ ಕೋಣೆಯ ವರೆಗೂ ಬಂದು ಬಾಗಿಲ ಬಳಿ ನಿಂತು ಹಣಕಿದರು. ಸ್ವಲ್ಪ ದೊಡ್ಡ ಮಕ್ಕಳೊಬ್ಬರೂ ಅಲ್ಲಿದ್ದಿಲ್ಲ.

ಉಂಡೆ ದೊರಕಿತೊಡನೆಯೇ ರಾಕ್ಷಸರಂತೆ ಬಾಯಿಗಳಿಗೆ ತುರುಕಿಕೊಂಡು ಅವರು ದಿಕ್ಪಾಲಾಗಿದ್ದರು. ಸಣ್ಣವರು ಮಾತ್ರ ಉಂಡೆ ಮೆಲ್ಲುತ್ತಿದ್ದರು. "ಅರೆ. ಎರಡೆರಡು ಬೆನ್ನಿಗೆ ಕೊಡಬೇಕೆಂದು ನಾನೆಣಿಸಿದ್ದರೆ ನೀವು ಉಂಡೆ ಕೊಟ್ಟಿರಲ್ಲಾ?" ಎಂದು ಮಗಳ ಕಡೆ ನೋಡಿ ನುಡಿದರು. ಉಂಡೆ ಕೊಟ್ಟ ಕತೆಯನ್ನು ನಾಗವೇಣಿ ವಿವರಿಸಿದಾಗ ತಂದೆಗೆ ಆನಂದವೇ ಆಯ್ತು. ನಾಗವೇಣಿಯ ಬೆನ್ನಿಗೆ ತನ್ನ ಬೆನ್ನು ಒರಿಸಿ ಉಂಡೆ ತಿನ್ನುತ್ತಿದ್ದ ಒಂದು ವರುಷದ ಮೊಮ್ಮಗಳು ಸರೋಜಳನ್ನು ನಾರಾಯಣರಾಯರು ಕರೆದರು "ಸರೋಜಾ, ಬಾಮ್ಮ. ಬಾ ಇಲ್ಲ. ನಂಗೂ ಒಂದು ಚೂರು ಉಂಡೆ ಕೊಡಮ್ಮ. ಒಂದು ಚೂರು ಕೊಡು. ಎಲ್ಲಿ? ಹಾಂ, ಹಾಂ" ಎಂದು ಬಾಯಿ ತೆಗಲಿಸಿ ಬಗ್ಗಿದರು. ಸರೋಜ ಬಂದು ಉಂಡೆಯ ಚೂರನ್ನು ಅವರ ಬಾಯೊಳಗಿಟ್ಟಾಗ ಗಪ್ಪನೆ ಬಾಯಿ ಮುಚ್ಚಿದರು. ಮಗುವಿನ ಮುಷ್ಠಿಯೂ ಅವರ ಬಾಯೊಳಗೆ. ಆ ಮೇಲೆ ಮಗುವನ್ನು ಹೆಗಲ ಮೇಲೆತ್ತಿಕೊಂಡು ತಮ್ಮ ಕೋಣೆಗೆ ಹೊರಟು ಹೋದರು. ಅವರ ಹಿಂದೆ ನಾಗವೇಣಿ ಎರಡನೇ ಸಲ ಚಹಾ ಮತ್ತು ಟಿಫಿನ್ ಹಿಡಿದುಕೊಂಡು ಹೊರಟಳು. ಎಲ್ಲ ಅವರಿದ್ದಲ್ಲೇ ಒಯ್ದು ಕೊಡಬೇಕಲ್ಲದೆ ಅವರಾಗಿ ಬರುವ, ಕೇಳುವ ಅಭ್ಯಾಸವಿಲ್ಲ. ಅಡಿಗೆ ಕೋಣೆಗೂ ಅವರು ಕಾಲಿಟ್ಟುದುದಿಲ್ಲ. ಯಾರಿದ್ದಾಗಲೂ ಅಷ್ಟೆ. ಯಾರಿಲ್ಲದಿದ್ದಾಗಲೂ ಅಷ್ಟೇ.

ಯಜಮಾನರಿಗೆ ಚಹಾ ಕಳಿಸಿದ ಮೇಲೆ ಗಂಗಮ್ಮನವರು ಮಗನನ್ನು ಸ್ಮರಿಸಿಕೊಂಡು ಕೊಸಯನ್ನುದ್ದೇಶಿಸಿ ಮಾತನಾಡಿದರು. "ಉತ್ತಮ ಎದ್ದನೇನು?". ನೋಡಲು ರೋಹಿಣಿ ಅಟ್ಟಕ್ಕೆ ಬಂದಳು.

ಉತ್ತಮ ಎರಡು ತಲೆದಿಂಬುಗಳನ್ನು ಬೆನ್ನಹಿಂದೆ ಲೋಡಿನಂತಿಟ್ಟು ಕೊಂಡು ಒರಗಿ ಕುಳಿತಿದ್ದ. ತಂದೆಯವರು ಅಂಗಳದಲ್ಲಿ ಗಟ್ಟಿಯಾಗಿ ಮಾತನಾಡಿದಾಗಲೇ ಅವನಿಗೆ ಎಚ್ಚರವಾಗಿತ್ತು. ಆದರೆ, ಹಲ್ಲು ಮೋರೆ ತೊಳೆಯಲು ಅವನು ಕೆಳಗೆ ಇಳಿದು ಬರಲಿಲ್ಲ. ಅಟ್ಟದಿಂದಿಳಿಯಲು ಮನಸ್ಸಾಗಲಿಲ್ಲ. ಅವನ ಹೃದಯದಲ್ಲಿ ದೊಡ್ಡ ತುಫಾನ್ ಎದ್ದಿದೆ. ಬಿರುಗಾಳಿ, ದುಃಖದ ಮಹತ್ತಾದ ತೆರೆಗಳನ್ನು ಎಬ್ಬಿಸಿದೆ. ನಾನಾ ವಿಚಾರಗಳು ಸುಳಿಗಳಂತೆ ಸುಳಿಯುತ್ತಿವೆ. ಆ ಸುಳಿಗಳಲ್ಲಿ ಅವನು ಸಿಕ್ಕಿದ್ದಾನೆ. ತಿರು

ತಿರುಗಿ ಮುಳುಗೇಳುತಿದ್ದಾನೆ ಅವುಗಳಲ್ಲಿ. ನೆಲೆಯೇ ಇಲ್ಲ; ನೆಲವೂ ಇಲ್ಲ. ಬಾಂದಳವೂ ಕಾರ್ಮೋಡಗಳಿಂದ ಕವಿದಿದೆ. ಸುತ್ತಲೂ ಕತ್ತಲೆ. ಕತ್ತಲೆಯಲ್ಲೇ ಕಳೆದ ರಾತ್ರಿ ನಿರಾಶೆ ಹೆಬ್ಬಾವಿನಂತೆ ಸದ್ದಿಲ್ಲದೆ ಹರಿದು ಬಂದು ಅವನ ಜೀವನದ ಆಶೆಯನ್ನು ನುಂಗಿದೆ. ಆಹಾ ! ಆಹಾ !

ಆಹಾ ! ಆಹಾ ಆ ಜೀವಕ್ಕೆಷ್ಟು ಆಶೆಯೇ ? ಯೌವನದ ಬಸಿರುಗಳು. ಸೌಂದರ್ಯದ ಬಯಕೆಗಳು; ನೇಹದ ನೆಚ್ಚು; ಪ್ರೇಮದ ಹುಚ್ಚು; ಮೋಹದ ಮಾಯೆ; ಸರ್ವೇಂದ್ರಿಯ ಸುಖಗಳ ಇಚ್ಛೆ; ಎಲ್ಲ ಅಭಿಲಾಷೆ ಆಕಾಶ ದಷ್ಟಿತ್ತು. ಒಂದೆರಡಲ್ಲ. ಒಂದೆರಡು ವರುಷಗಳದ್ದೂ ಅಲ್ಲ. ಸಣ್ಣ ಹುಡು ಗನಾಗಿದ್ದಾಗ ಚಿಣ್ಣಿ ಕೋಲು ಚಂಡು ಬುಗರಿಗಳೊಂದಿಗೆ ಹೆಣ್ಣಿನ ಗೊಂಬೆಯೂ ಇತ್ತು ಅವನಲ್ಲಿ. ಅದಕ್ಕೆ ಸೀರೆ ಉಡಿಸಿ, ಹೂ ಮುಡಿಸಿ, ಮಾಲೆಹಾಕಿ ತೊಳಿನುಯ್ಯಲೆಯಲ್ಲಿ ತೂಗಿದ್ದ. ನೆರೆಮನೆ, ಕರೆಮನೆ ಹುಡುಗ ಹುಡುಗಿಯರೊಂದಿಗೆ ಮನೆಯಾಟ, ಚಿನ್ನಾಟ, ಕಣ್ಣುಮುಚ್ಚಾಲೆ ಆಟಗಳೊಂದಿಗೆ ಮದುವೆ ಆಟಕೂಡ ಆಡಿದ್ದ. ಎಳೆ ಹೆಣ್ಮಕ್ಕಳ ಕೈ ಹಿಡಿದು ಕುಣಿದಾಗ, “ ಗಂಡ—ಹೆಂಡತಿ” ಎಂದು ಮನೆ ಮಂದಿ ನಕ್ಕಾಡಿದ್ದು ದುಂಟು. ಹಬ್ಬ ಹುಣ್ಣಿಮೆಗೆ ಮನೆಗೆ ಬಂಧುಗಳು ಬಂದಾಗ, “ನಮ್ಮ ಹುಡುಗಿಯನ್ನು ನಿಮ್ಮ ಹುಡುಗನಿಗೆ ಕೊಟ್ಟು ಬಿಡುತ್ತೇವೆ. ಮಾಡಿಕೊಂಡು ಬಿಡಿ” ಎಂದವರೂ ಬಹಳ. ಮುಂಜಿಗೆ ಕೂತಾಗ, “ಒಂದು ಹುಡುಗಿಯನ್ನು ಕರೆದು ತಂದು ಮಣೆಯ ಮೇಲೆ ಕುಳ್ಳಿರಿಸಿ ಬಿಡಿ. ಮದುವೆ ಈಗಲೇ ಆಗಿ ಹೋಗಲಿ ” ಎಂದು ಹೇಳಿ ಕೂಡಿದ ಸಭೆಯಲ್ಲಿ ನಗೆಯನ್ನು ಹುಟ್ಟಿಸಿದವ ರಿದ್ದರು.

ಕಾಲೇಜಿಗೆ ತೆರಳಲು ಆರಂಭಿಸಿದ ಮೇಲೆ ಅವನ ಜೀವ ತಳಮಳಿಸ ತೊಡಗಿತು. ಹುಡುಗಿಯರ ನಡೆನುಡಿ ಬೆಡಗು ಬಿನ್ನಾಣಗಳು ಆಕರ್ಷಿಸು ತಿದ್ದುವು. ಅವರ ಕಡೆಗಣ್ಣೋಟ ಮೈಯನ್ನು ಜುಮ್ಮೆನ್ನಿಸುತಿತ್ತು. ಅವರ ಮುಖಕಾಂತಿ ಅವನ ಮುಖವನ್ನೂ ಮನಸ್ಸನ್ನೂ ಅರಳಿಸುತಿತ್ತು. ಮನಸ್ಸಿ ನಲ್ಲಿ ಏನೇನೋ ಯೋಚಿಸುತಿದ್ದ. ಯಾವುದೋ ಸುಂದರ ರಮಣಿಯರ ಚಿತ್ರವನ್ನು ಬರೆಯುತಿದ್ದ. ಶೃಂಗಾರ ರಸಭರಿತ ಕಾವ್ಯಗಳನ್ನೋದಿ ಕಲ್ಪ ನೆಗಳ ಉತ್ತುಂಗ ಗಿರಿಗಳನ್ನೇರಿದ. ಮುಗದದ ಕೆರೆಯ ತಾವರೆಗಳು ಅವ

ನನ್ನು ಕೆರಳಿಸಿದುವು. ರಸ್ತೆಯ ಬದಿಯ ಬೇವಿನ ಸಾಲುಮರಗಳ ಮರೆಯಲ್ಲಿ ಕುಳಿತ ಕೋಗಿಲೆ "ಕೂಹು, ಕೂಹು" ಎಂದು ಕೂಗಿ ಕೂಗಿ, ಅವನ ಜೀವವೂ ಸಂಕಟದಿಂದ ಸಂಗಾತಿಯನ್ನು ಕೂಗುವಂತೆ ಪ್ರೇರೇಪಿಸಿತು. ಜೀವನದ ಜತೆಗಾತಿ ಬಂದಾಗ, ಅವನ ಜೀವ ವೀಣೆಯು ಅಣಿಯಾಗಿತ್ತು.

ಉತ್ತಮನ ಜೀವ ವೀಣೆಗೆ ಪಂಚೇಂದ್ರಿಯಗಳ ಪಂಚ ತಂತಿಗಳು. ಕಾಂತೆ ಬಂದು ವೀಣೆಯನ್ನು ತೆ ಎಡೆಯ ಮೇಲಿಟ್ಟುಕೊಂಡು, ತೋಳಿನಿಂದ ಆಲಿಂಗಿಸಿ, ಒಂದೊಂದೇ ತಂತಿಯನ್ನು ಹಿಡಿದು ಮಿಡಿದು, ತಾಂಬೂಲ ತುಟಿ ತೆರೆದು ಹಾಡಿದಾಗ ಮೋಹನ ರಾಗ, ಮೋಹರಾಗ, ನೇಹರಾಗ, ಭೋಗಾನುರಾಗಗಳ ಸಪ್ತಸ್ವರ ಸುಸ್ವರಗಳೆದ್ದು ಏಳೇಳು ಜನ್ಮದ ಏಳೋಹನ್ನೊಂದು ಆಶೆಗಳನ್ನು ತೃಪ್ತಿಗೊಳಿಸುವಳೆಂದು ತಪ್ತನಾಗಿದ್ದ. ಆದರೆ ರೋಹಿಣಿ ವೀಣೆಯ ಗೋಣಿಗೆ ನೇಣನ್ನು ಬಿಗಿದಳು! ಹಾಗೆ ಅವನು ತಿಳಿದುಕೊಂಡಿದ್ದಾನೆ. ಅಥವಾ ಅವಳು ವಿಷಾದ ರಾಗವನ್ನು ನುಡಿಸಿದಳೆಂದು ಅವನ ಭಾವನೆ. ತಂತಿ ಹರಿದು ಅಪಸ್ವರಗಳೇ ಹೊರಡುತ್ತಾಗಿವೆ. ಅದರಿಂದ ಅವನೆದೆಗೆ ವಿಪುಲ ವೇದನೆಯಾಗಿದೆ; ನೀರವ ರೋದನ ಹೊರಟಿದೆ. ಕಣ್ಣುಗಳು ಕೆಂಪಡರಿವೆ. ತಲೆಗೂದಲುಗಳೂ ನೆಟ್ಟಗಾಗಿವೆ.

ಆಟ್ಟಕ್ಕೆ ಬಂದ ರೋಹಿಣಿ ಅವನ ಈ ಅವಸ್ಥೆಯನ್ನು ಕಂಡು ಬೆಚ್ಚಿಬಿದ್ದಳು. ಮೈಕಂಪಿಸಿತು. ನಾಲಿಗೆ ತತ್ತರಿಸಿತು. ಅಂಜಿ ಅಂಜಿ ಮಂಚದ ಸಮೀಪಕ್ಕೆ ಸರಿದು ತಿಳಿಸಿದಳು. "ಸ್ವಾಮೀ, ಚಹಾ......" ಮುಂದೆ ಮಾತುಗಳೇ ಹೊರಡಲಿಲ್ಲ. ಗದ್ಗದಿತ ಕಂಠೆಯಾದಳು. ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಬಿಸುಸುಯ್ದಳು. ನಿನ್ನೆ ರಾತ್ರಿ ಇದೇ ರೀತಿ ಅವಳು ಅತ್ತಾಗ ಉತ್ತಮ ಅವಳನ್ನು ಸಂತೈಸಿದ್ದ. ನಿಜ. ಆದರೆ ಈಗ, ಕುಳಿತಲ್ಲಿಂದ ಏಳಲಿಲ್ಲ. "ನೀನು ಯಾಕೆ ಅಳುತಿದ್ದೀ?" ಎಂದು ಪ್ರಶ್ನಿಸಲಿಲ್ಲ. ರೋಹಿಣಿ ದುಃಖವನ್ನು ಸಹಿಸಲಾರದೆ ಅವನ ಕಾಲುಗಳಿಗೆ ಬಿದ್ದು ಕೇಳಿಕೊಂಡಳು.

"ತಮಗೆ ಬಹಳ ಸಿಟ್ಟು ಬಂದಿದೆ ಅಲ್ಲವೇ?"

ಉತ್ತಮ ಉತ್ತರವನ್ನೀಯಲಿಲ್ಲ. ಉತ್ತರ ಕೊಡಬೇಕಾದ ಅವಶ್ಯ

ಕತೆಯೂ ಇರಲಿಲ್ಲ. ಅವನ ಮೋರೆಯೇ ಅವಳ ಪ್ರಶ್ನೆಗೆ ಯೋಗ್ಯ ಪ್ರತ್ಯುತ್ತರವಾಗಿತ್ತು. ರೋಹಿಣಿಯಾದರೂ ಅದನ್ನು ಅರಿಯದವಳಲ್ಲ. " ಸ್ವಾಮಿ ಇಷ್ಟು ಕಠೋರರಾಗ ಬೇಡಿರಿ. ನನ್ನೊಡನೆ ಮಾತನಾಡದಂತಹ ನಿಷ್ಠುರತನ ತೋರಿಸುತಿದ್ದೀರಲ್ಲ! ಕೈ ಹಿಡಿದ ಪುರುಷನಲ್ಲಿ ಸ್ವಲ್ಪ ಕರುಣೆ ಇರಲಿ ಎಂದು ಬೇಡಿಕೊಳ್ಳುತಿದ್ದೇನೆ. ಉರಿ ಮೋರೆ ನೋಡಿದರೆ ಅಪ್ಪ, ಅಮ್ಮ ಏನೆಂದಾರು? ಅದಕ್ಕೆ ನಾನೇ ಕಾರಣಳೆಂದು ಅವರು ತರ್ಕಿಸ ಬಹುದು ನೀವಾದರೂ ಹೇಳ ಬಹುದೋ ಏನೋ! ಅದರಿಂದ ಅವರಿಗೆ ಅತ್ಯಂತ ದುಃಖವಾಗುವುದು ನಿಶ್ಚಯ. ಅವರ ಮನಸ್ಸಿಗೆ ನೋವನ್ನುಂಟು ಮಾಡಲು ನಾನು ಸಿದ್ಧಳಿಲ್ಲ. "

" ನನ್ನ ಮನಸ್ಸನ್ನು ನೋಯಿಸಬಹುದೇ ? "

" ಅದೂ ಕೂಡದು. "

" ಈಗಾಗಲೇ ನೋವಾಗಿದ್ದರೆ ? "

" ಅದನ್ನು ಪರಿಹರಿಸಲು ಪ್ರಯತ್ನಿಸುತ್ತೇನೆ "

" ಮಾಡಿದ ತಪ್ಪಿಗೆ ಶಿಕ್ಷೆಯೇ ಇಲ್ಲವೇನು ? "

" ತಪ್ಪಿಗೆ ಶಿಕ್ಷೆಯೊಂದೇ ಅಲ್ಲ; ಕ್ಷಮೆಯೂ ಇದೆ ಸ್ವಾಮಿ. ಕ್ಷಮಿಸಿರಿ ಎಂದು ನಾನು ಕೇಳಿಕೊಳ್ಳುವುದಿಲ್ಲ. ಶಿಕ್ಷೆ ಅನುಭವಿಸಲು ಸಿದ್ಧಳಿದ್ದೇನೆ. ಆದರೆ ಯಾವ ತಪ್ಪಿಗೆ ? "

ಉತ್ತಮನು ಕತ್ತನ್ನು ಬಗ್ಗಿಸಿ, ಕುಗ್ಗಿದ ಧ್ವನಿಯಲ್ಲಿ ಕೇಳಿದ. " ಪತಿಯ ಶಯ್ಯೆಗೆ ಬಾರದೆ ಕೆಳಗೆ ಮಲಗಿಕೊಂಡುದುದು ತಪ್ಪಲ್ಲವೇ ? "

ರೋಹಿಣಿ ಸ್ವಲ್ಪ ತಡೆದು ನುಡಿದಳು. " ಪತಿಯ ಶಯ್ಯೆ ಸೇರಿಕೊಳ್ಳಬೇಕೆಂದು ಒತ್ತಾಯವೇ ಇದೆಯೇನು ? "

" ಒತ್ತಾಯವಲ್ಲ; ಧರ್ಮ "

ರೋಹಿಣಿ ಆಲೋಚಿಸಿ, " ನಿಮಗೆ ಸಿಟ್ಟಿಲ್ಲದಿದ್ದರೆ ನಾನು ಕೆಲವು ವಿಷಯಗಳನ್ನು ಕೇಳಬೇಕೆಂದಿದ್ದೇನೆ " ಎಂದಳು.

" ಕೇಳು " ಎಂದ ಉತ್ತಮನು.

" ನಾನು ಅಜ್ಞಾನದಿಂದಲೇ ಕೇಳಬಹುದು "

" ಯಾರೂ ಜ್ಞಾನಿಗಳಿಲ್ಲ "

" ನಿಮಗೆ ಆಶ್ಚರ್ಯವಾಗಲೂ ಬಹುದು "

" ದುಃಖವಾಗದಿದ್ದರೆ ಸರಿ "

ರೋಹಿಣಿ ಮತ್ತೆ ತಲೆ ತಗ್ಗಿಸಿದಳು. ತಲೆಎತ್ತಿದಾಗ ಆವಳ ಬಾಯಿಂದ ಮಾತುಗಳೂ ಹೊರಟುವು. "ಸ್ವಾಮಿ, ಜೀವ ಸದಾಗಾಲ ಸುಖವನ್ನೇ ಬಯಸುತ್ತದೆ. ಆದರೆ, ಜೀವನದಲ್ಲಿ ಆದಿಯಿಂದ ಅಂತ್ಯದ ವರೆಗೂ ಸುಖದ ಸಂಗೀತವನ್ನೇ ಕೇಳಲು ಸಾಧ್ಯವಿದೆಯೇನು ? ಜೀವಾವಧಿಯ ವರೆಗೆ ಸುಖವನ್ನೇ ಸವಿದ ಜನ ಈ ಲೋಕದಲ್ಲಿ ಇದ್ದಾರೆಯೇ ? ಶ್ರೀಮಂತ ರಾದರೂ ಅಷ್ಟೆ. ಬಡವರಾದರೂ ಅಷ್ಟೆ. ಅಷ್ಟು ಪುಣ್ಯವಂತರು ಈ ಧರಿತ್ರಿಯಲ್ಲಿ ಇರಲಿಕ್ಕಿಲ್ಲ. ಅನ್ನ ಅರಿವೆಗಳ ಚಿಂತೆ, ಮಡದಿಮಕ್ಕಳ ಚಿಂತೆ. ದೈಹಿಕ ರೋಗ ರುಜೆಗಳ ಬಾಧೆ ಮೊದಲಾದ ಒಂದಲ್ಲದಿದ್ದರೆ ಇನ್ನೊಂದು ದುಃಖ ಮನುಷ್ಯರನ್ನು ದಹಿಸುತ್ತದೆ. ಸುಖದ ರಸ ನಿಮಿಷಗಳು ಅಲ್ಪ ಆದರ ಗೆರೆ ಮಿಂಚಿತೆಂದಾಗ ಮತ್ತೆ ಮಾಯವಾಗುತ್ತದೆ. ಮತ್ತು ದುಃಖ ಬೆಂಬತ್ತಿ ಬರುತ್ತದೆ. ಸುಖದುಃಖ ಹಗಲಿರುಳಂತೆ ಎಂದು ಕೇಳಿದ್ದೇನೆ. ಆದರೆ ಹಗಲಿಗಿಂತ ರಾತ್ರಿಯೇ ದೊಡ್ಡದೆಂದು ನನ್ನ ಭಾವನೆ. ಅಥವಾ ರಾತ್ರಿಯ ಭೀಕರ ಅನುಭವ ಹಗಲಿನಲ್ಲೂ ಇರುವುದರಿಂದ ರಾತ್ರಿ ದೊಡ್ಡ ದಾಗಿ ಕಾಣಲೂ ಸಾಕು."

ಉತ್ತಮ ಕಣ್ಣುಗಳನ್ನು ಮುಚ್ಚಿಕೊಂಡು ಹೇಳಿದ. " ಹೌದು ಎಲ್ಲಕ್ಕೂ ಮನಸ್ಸೇ ಮೂಲ "

" ಆ ಮನಸ್ಸು ಸ್ತ್ರೀಯರಿಗೂ ಇದೆಯೇ ? "

" ಇದೆ. ಸಂದೇಹವಿಲ್ಲ. "

" ಅವರ ಮನಸ್ಸಿನಲ್ಲೂ ಸುಖದುಃಖದ ಅನುಭವಗಳಾಗುತ್ತ ದಲ್ಲವೇ ?"

" ನಿಜ "

" ಸ್ತ್ರೀಗೆ ದೈಹಿಕ ಸುಖವಿಲ್ಲದಿದ್ದರೂ ಆವಳು ಪತಿಯ ಶಯ್ಯೆಯಲ್ಲಿ ಒರಗಿ ಅವನ ಇಚ್ಛೆಗೆ ಅನುಕೂಲಳಾಗ ಬೇಕೇ ? "

"ಅದರಂತೆ ಬಯಸುವ ಪುರುಷರೂ ಇದ್ದಾರೆ. ಆದರೆ ಅದು ಸರಿಯಲ್ಲ"

" ಸರಿಯಲ್ಲ. ನಿಜ. ಆದರೆ ಗಂಡಸರು ಅದನ್ನು ಅಪೇಕ್ಷಿಸುತ್ತಾರೆ.

ಆಶೆ ಈಡೇರದಿದ್ದರೆ ಸಿಟ್ಟಾಗುತ್ತಾರೆ. ''

ಉತ್ತಮನಿಗೆ ನಾಚಿಕೆಯಾಯಿತು.

ರೋಹಿಣಿ ಅಲ್ಲೇ ಮಾತು ನಿಲ್ಲಿಸಲಿಲ್ಲ. " ಪತಿ ಕುರೂಪಿ, ಕುರುಡ ಆಜನ್ಮ ರೋಗಿಯಾಗಿದ್ದರೂ ಸ್ತ್ರೀ ಅವನನ್ನು ಮೆಚ್ಚಿ ಕೈಯ್ಯಾಗೆ ಬರಬೇಕು. ಇಲ್ಲದಿದ್ದರೆ ಅದು ದೊಡ್ಡ ಅಪರಾಧವಾಗುತ್ತದೆ. ಸತೀಧರ್ಮಕ್ಕೆ ಕಲಂಕ!"

ಏನುತ್ತರ ಕೊಡಬೇಕೆಂದು ಉತ್ತಮನಿಗೆ ತೋಚಲಿಲ್ಲ. ಅವಳು ಮತ್ತೂ ಹೇಳಿದಳು. ಸಾಂಸಾರಿಕ ಜೀವನದಲ್ಲಿ ಮನಸ್ಸಿಲ್ಲದವರು, ಮನಸ್ಸು ಮುರಿದವರು ಹೇರಳ ಸ್ತ್ರೀಯರಿದ್ದಾರೆ. ಆಗಲೂ ಪುರುಷನು ಸಹಿಸುವುದಿಲ್ಲ. ಅವಳದೇ ತಪ್ಪಾಗುತ್ತದೆ ಅಲ್ಲವೇ ? ''

ಉತ್ತಮ ಚಕಿತ ನೇತ್ರಗಳಿಂದ ರೋಹಿಣಿಯನ್ನು ನೋಡಲಾರಂಬಿಸಿದ. ಇವಳು ಯಾಕೆ ಹೀಗೆಮಾತನಾಡುತ್ತಿರುವಳೆಂದು ಅರ್ಥವಾಗಲೊಲ್ಲದು. ಅವಳ ಮಾತಿನಲ್ಲಿ ಅನೇಕ ಭಾವಾರ್ಥಗಳಿವೆ. ಅರ್ಥಗರ್ಭಿತವಾಗಿವೆ. ಆವನು ಕೇಳಿದುದು ಒಂದೇ ಒಂದು ಪ್ರಶ್ನೆ. ಅವಳು ಒಂದೇ ಉತ್ತರ ಕೊಡುವುದರ ಬದಲು ಅನೇಕ ಉತ್ತರವನ್ನು ಕೊಟ್ಟಿದ್ದಾಳೆ. ಉತ್ತರ ರೂಪವಾಗಿ ಕೆಲವು ಪ್ರಶ್ನೆಗಳನ್ನು ಕೇಳಿದ್ದಾಳೆ. ಅವು ಸ್ತ್ರೀ ಜೀವನದ ಅನಂತ ಮುಖಗಳನ್ನು ದಿಗ್ದರ್ಶಿಸುತ್ತವೆ. ಸ್ತ್ರೀಯ ಮನೋಭಾವಗಳ ಕೈಗನ್ನಡಿಯಾಗಿಯೂ ಅವನಿಗೆ ತೋರಿತು. ಅದರಿಂದ ಆವನಿಗೆ ಸ್ವಲ್ಪ ಲಜ್ಜೆಯೂ ಆಗಿದೆ. ಸಿಟ್ಟು ಸ್ವಲ್ಪ ಇಳಿದಿದೆ. ವಿಚಾರ ಗೊಂದಲದಲ್ಲಿ ಸಿಕ್ಕಿದಂತೆ ತೋರುತ್ತದೆ. ಮುಖದ ಭಾವ ಕಂಡ ರೋಹಿಣಿ " ಬನ್ನಿ, ಚಹಾ ತೆಗೆದುಕೊಳ್ಳಿ " ಎಂದು ಕರೆದಳು.

" ಬೇಡ. ನಾನು ಬರುವುದಿಲ್ಲ. ಇಲ್ಲೇ ತಾ " ಎಂದ ಉತ್ತಮ.

" ಹಲ್ಲು ಮೋರೆ ತೊಳೆಯುವುದಿಲ್ಲವೇ ? ಮಾವಯ್ಯನವರು ಬೆಳಗಾಗುವುದರೊಳಗೆ ಹಾಸಿಗೆಯಲ್ಲೇ ಚಹಾ ಕುಡಿಯುತ್ತಾರೆ. ತಂದೆಯಂತೆ ಮಗನಿಗೂ ವೃದ್ಧಾಪ್ಯ ಬಂದಿತೇ ? ''

ಆವನು ನಕ್ಕ

ರೋಹಿಣಿ ಧೈರ್ಯದಿಂದ ಅವನಕೈಹಿಡಿದು ಎಳೆದುಕೊಂಡು ಹೋದಳು.

# ನಾಲ್ಕನೆಯ ಅಧ್ಯಾಯ

ಪುರುಷೋತ್ತಮನಿಗೆ ಸರಕಾರೀ ಕೆಲಸವಿದೆ ಕೆಲಸ ಎಂದಾದ ಬಳಿಕ ಕೆಲವು ನಿಯಮಗಳೂ ಇದ್ದೇ ಇರುತ್ತವೆ. ರಜೆ ಮುಗಿದ ಮರು ದಿನ ಮತ್ತೆ ಹಾಜರಾಗಬೇಕಾದುದು ಅವುಗಳಲ್ಲೊಂದು. ಕೆಲಸ ದೂರದ ದಿಲ್ಲಿಯಲ್ಲಿದ್ದರೂ ಅಷ್ಟೆ. ಒಗ್ಗದ ಮಲೆನಾಡಿನ ಒಂದು ಹಳ್ಳಿಯಲ್ಲಿದ್ದರೂ ಅಷ್ಟೆ. ಕೆಲಸಕ್ಕೆ ಅಂಟಿಕೊಂಡಿರುವ ವರೆಗೆ ಆ ನಿಯಮಗಳನ್ನು ಪಾಲಿಸದೆ ನಿರ್ವಾಹವಿಲ್ಲ. ಅವರಲ್ಲೂ ಅಂಚೆ ಖಾತೆಯ ಕಥೆಯೇ ಬೇರೆ. ಹುಟ್ಟು ಸಾವು, ಕ್ಷೇಮ ಕ್ಷಾಮ, ಶುಭ ಶೋಭನ ಯಾವುದೂ ಅಂಚೆ ಖಾತೆಯ ನಿಯಮಗಳನ್ನು ಸಡಿಲಿಸುವದಿಲ್ಲ. ವೇಳೆಗೆ ಸರಿಯಾಗಿ ನೌಕರರು ಬರ ಬೇಕಾಗುತ್ತದೆ ಮತ್ತು ಹೊತ್ತಿಗೆ ಸರಿಯಾಗಿ ಕಾಗದ ಪತ್ರಗಳ ಗಂಟು ಮೂಟೆಗಳು ಒಂದೂರಿನಿಂದ ಇನ್ನೊಂದಕ್ಕೆ ಹೊರಡಬೇಕಾಗುತ್ತದೆ. ಪುರು ಷೋತ್ತಮನೂ ದುಃಖದ ದೊಡ್ಡಗಂಟನ್ನು ಹೊತ್ತುಕೊಂಡು ಸಾತಾರಕ್ಕೆ ಹೊರಟುಹೋದ.

ಮನೆ ಅವನಿಗೆ ಅರಗಿನ ಮನೆಯಾಗಿಯೇ ಪರಿಣಮಿಸಿತ್ತು. ಹೇಗೆ ಪಾರಾಗಲಿ, ಯಾವಾಗ ಪಾರಾಗಲಿ ಎಂದು ತಳಮಳಿಸುತಿದ್ದ. ಮನಸ್ಸಿನ ಉದ್ವೇಗವನ್ನು ಸಹಿಸಲು ಅಸಾಧ್ಯವಾಗಿದ್ದಿತು. ಎದೆಯ ಮೇಲೆ ಭಾರ ವಾದ ಮರದ ತುಂಡು ಬಿದ್ದಂತಿತ್ತು. ನೆಲಕ್ಕೆ ಅಪ್ಪಳಿಸಲ್ಪಟ್ಟಿದ್ದ ಉತ್ತಮ ಏಳಲಾರ. ಬಾಯಿತೆಗೆದು ಅಳಲಾರ. ಯಾರೋ ಅವನ ಬಾಯಿಗೆ ಕೈ ಹಿಡಿದು ಮುಚ್ಚಿದಂತಿತ್ತು. ಆದುದರಿಂದ ಅವಸರದಿಂದ ಸಾತಾರಕ್ಕೆ ಓಡಿ ಹೋಗಲು ಬಯಸಿದ್ದ. ಅಲ್ಲಿಗೆ ತೆರಳಿದ ಮೇಲೆ ಈ ದುಃಖ ನೀಗ ಬಹು ದೆಂದು ಅವನ ನಂಬಿಗೆಯಾಗಿತ್ತು. ಏಕೆಂದರೆ, ಧಾರವಾಡದಿಂದ ಸಾತಾರ ಬಹಳ ದೂರದಲ್ಲಿದೆ; ಅಷ್ಟು ದೂರ ದುಃಖ ತನ್ನ ಬೆಂಬತ್ತಿ ಬರಲಾರ ದೆಂದು ತಿಳಿದಿದ್ದನೋ ಏನೋ ! ಅಥವಾ ದಿನನಿತ್ಯದ ಕೆಲಸಗಳಲ್ಲಿ ಅದ್ದು ಹೂತು ಹೋಗಬಹುದೆಂದು ಭಾವಿಸಿರಲೂ ಸಾಕು.

ಆದರೆ, ಸಾತಾರಕ್ಕೆ ಬಂದ ಮೇಲೆ ಅವನ ಅನುಭವವೇ ಬೇರೆಯಾಯ್ತು. ಮೊದಲೇ ಅದು ಪರವೂರು. ಜನರೂ ಪರಕೀಯರು. ಅವರ ವೇಷ ಭಾಷೆಗಳೂ ಬೇರೆ. ಬಹಳ ಜನರ ಗುರುತು ಪರಿಚಯವೂ ಅವನಿಗಿಲ್ಲ. ಬಂಧು ಬಳಗದವರು ಮೊದಲೇ ಇಲ್ಲ. ಜನರೊಡನೆ ಅವನ ಸಂಪರ್ಕವೇ ಕಡಿಮೆ. ಸಂಪರ್ಕ ಬೆಳೆಸಲು ಅವನಿಗೆ ಅವಕಾಶವೂ ಇದ್ದಿಲ್ಲ. ಅವನ ಕೆಲಸವೇ ಅಂತಹುದು. ಟಪ್ಪಾಲು ಕಚೇರಿಯ ಗೋಡೆಗಳ ಗೂಡಿನೊಳಗೆ ಅವನು ಮುಂಜಾನೆಯಿಂದ ಸಂಜೆಯ ವರೆಗೆ ಕುಳಿತುಬಿಡಬೇಕಾಗಿತ್ತು. ಕುಳಿತು ಕುಳಿತು ಬೇಸರ ಬರುತಿತ್ತು. ಅದನ್ನು ಕಳೆಯಲು ಎಲ್ಲಾದರೂ ಗಾಳಿಸವಾರಿಗೆ ಅವನು ಹೋಗುತಿದ್ದ. ಭಾನುವಾರ ಒಮ್ಮೊಮ್ಮೆ ಮ್ಯಾಟನಿ ಸಿನಿಮಾಗಳನ್ನು ನೋಡಿದ್ದುವೂ ಉಂಟು. ಸಹೋದ್ಯೋಗಿಗಳು ಆಗ್ರಹಪಡಿಸಿದಾಗ ಇಸ್ಪೀಟು ಆಟದಲ್ಲೂ ಭಾಗವಹಿಸುತಿದ್ದ. ಉಳಿದ ವೇಳೆಯಲ್ಲಿ ಅವನಾಯಿತು. ಅವನ ಕೋಣೆಯಾಯ್ತು ಹೀಗಾಗಿ ಮೊದಲಿನಿಂದಲೂ ಅವನ ಜೀವನ ಒಂಟಿಯಾಗಿಯೇ ಸಾಗಿತ್ತು.

ಈಗಂತೂ ದುಃಖದ ದೊಡ್ಡ ಹೊರೆಯನ್ನು ಹೊತ್ತಿದ್ದಾನೆ. ಅದನ್ನು ಇಳಿಸಲಾರ. ಇಳಿಸಲು ಶಕ್ಯವೂ ಇಲ್ಲ. ತಲೆ ಹೊರೆಗಿಂತಲೂ ಅದರ ಭಾರ ಅತ್ಯಧಿಕವಾಗಿದೆ. ಹೊತ್ತು ಗೊತ್ತಿಲ್ಲ. ಕಾಲುಗಳು ಸೋತಿವೆ. ಜೀವ ಬಳಲಿದೆ. ಮೋರೆ ಸಪ್ಪಗಾಗಿದೆ. ಗೆಲುವಿನ ಚಿಹ್ನೆಗಳೇ ಇಲ್ಲ ಅಲ್ಲಿ. ನಗೆ ಮುಖ ಹೊಗೆ ಮುಖವಾಗಿದೆ. ಮಾತೂ ವಿರಳ. ಮಾತನಾಡಿಸಿದರೆ ಮಾತು. ಹತ್ತು ಮಾತಿಗೆ ಒಂದುತ್ತರ. ಗಂಭೀರ. ಆಫೀಸಿನಲ್ಲಿಯೂ ಅಷ್ಟೆ. ಆಫೀಸು ಕೆಲಸದ ವೇಳೆಗೆ ಸರಿಯಾಗಿ ಬರುತ್ತಾನೆ. ಗಂಟೆಯಾದೊಡನೆಯೇ ಕೋಣೆಯ ದಾರಿ ಹಿಡಿವ. ನೆಟ್ಟಗೆ ತನ್ನ ಕೋಣೆಗೆ ತೆರಳುವನು. ಕೋಣೆಯೇ ಅವನ ಗುಹೆಯಾಗಿದೆ. ಅಲ್ಲಿಂದ ಅವನು ಹೊರಗೆ ಕಾಲಿಡುವುದೇ ಕಷ್ಟ. ಆರಾಮು ಕುರ್ಚಿಯಲ್ಲಿ ಕುಳಿತು ಕುಳಿತು ಬೇಸರವಾದಾಗ ಹಾಸಿಗೆಯಲ್ಲಿ ಒರಗಿಬಿಡುವನು. ಆ ಹಾಸಿಗೆಯನ್ನು ಹಾಸಬೇಕಾಗಿಯೂ ಇಲ್ಲ. ಏಕೆಂದರೆ ಧಾರವಾಡದಿಂದ ಬಂದ ಮೇಲೆ ಹಾಸಿದ ಹಾಸಿಗೆ ಹಾಸಿಯೇ ಇದೆ. ಲಾಟಾನೂ ಹಚ್ಚಬೇಕೆಂದೂ ಅವನಿಗೆ ತೋಚುವುದಿಲ್ಲ. ಹಚ್ಚಿದರೆ ಹಚ್ಚಿದ. ಇಲ್ಲದಿದ್ದರೆ ಇಲ್ಲ. ಒಮ್ಮೊಮ್ಮೆ ಕತ್ತಲಲ್ಲೇ ಇದ್ದು ಬಿಡುವನು.

ಅಲ್ಲೀ ಕಣ್ಣಿಗೆ ಜೋಂಪು ಹತ್ತುವುದೂ ಉಂಟು. ಊಟವನ್ನು ಮರೆತು ಬಿಟ್ಟು ಮಲಗುವುದೂ ಇದೆ. ಕೋಣೆಯ ಬಾಗಿಲನ್ನು ಹಾಕಿದ್ದೇನೋ ಇಲ್ಲವೋ ಎಂಬೂ ಎದ್ದು ನೋಡಲಾರ. ಒಂದೆರಡು ಸಲ ಮುಂಜಾನೆ ಎದ್ದಾಗ ಕೋಣೆಯ ಬಾಗಿಲುಗಳು ತೆರೆದೇ ಇದ್ದುವು. ಅದನ್ನು ಕಂಡ ಮೇಲೆ ಕೋಣೆಗೆ ಪ್ರವೇಶಿಸಿದೊಡನೆಯೇ ಬಾಗಿಲಿಕ್ಕಿಕೊಳ್ಳಲು ಆರಂಭಿಸಿದ.

ಕೋಣೆಯ ಬಾಗಿಲುಗಳನ್ನು ಮುಚ್ಚಿಕೊಳ್ಳಬಹುದು. ಆದರೆ, ಅದರಿಂದ ಮನಸ್ಸಿನ ಕದವನ್ನು ಮುಚ್ಚಲಾದೀತೆ ? ಕಲ್ಲು, ಕಬ್ಬಿಣ, ಗೋಡೆ, ಮರದ ಹಲಿಗೆಗಳನ್ನು ಅದು ಭೇದಿಸಿ ಚಲಿಸುತ್ತದೆ. ಅದನ್ನು ತಡೆದು ನಿಲ್ಲಿಸುವುದು ಯೋಗಿಗಳಿಗೂ ಕಠಿನವಾಗಿದೆ. ಹೀಗಿರುವಾಗ ಪುರುಷೋತ್ತಮನಂತಹ ಭೋಗ ಜೀವಿಯ ಪಾಡೇನು ? ಆದುದರಿಂದ ಅವನು ಒಬ್ಬನೇ ಇದ್ದಾಗ ದುಃಖದ ಕುದಿಗಳು ಮತ್ತಷ್ಟು ಏಳತೊಡಗಿದುವು. ರೋಹಿಣಿಯನ್ನು ಮತ್ತೆ ಮತ್ತೆ ಸ್ಮರಿಸಲಾರಂಭಿಸಿದ. ಏಕಾಂತದಲ್ಲಿ ಕುಳಿತು ಒಂದೊಂದೇ ಘಟನೆಗಳನ್ನು ಮೆಲುಕಾಡತೊಡಗಿದ.

ರೋಹಿಣಿಯ ವರ್ತನೆ ಬಹಳ ವಿಚಿತ್ರವಾಗಿದೆ. ಅದು ನಿನ್ನೆ ಮೊನ್ನೆಯಿಂದಲ್ಲ. ಮದುವೆಯಾದ ದಿನದಿಂದಲೂ ಹೀಗೆಯೇ ಎಂದು ಈಗ ಸ್ಮರಿಸಿಕೊಳ್ಳುತಿದ್ದಾನೆ. ಅವಳು ಬೇರೆ ಹುಡುಗಿಯರಂತಿರಲಿಲ್ಲ. ಮದುವೆಯಾದ ಎಷ್ಟೋ ಹೆಣ್ಣುಮಕ್ಕಳು ಆ ಗಳಿಗೆಯಿಂದಲೇ ಪ್ರಣಯ ಚೇಷ್ಟೆಗಳನ್ನು ಮಾಡುವರು. ಗಂಡನನ್ನು ಕಾಣಲು ಕಾತರಿಸುವರು. ಮೊರೆ ನೋಟದಿಂದ ನೋಡುವರು. ದೃಷ್ಟಿ ತಾಗಿದಾಗ ನಗು. ಯಾರಿಗೂ ಗೊತ್ತಾಗದಂತೆ ಮೆಲ್ಲಗೆ ಉಗುರಿಕ್ಕುವರು. ತಾಂಬೂಲ ಕೊಡಲು ಬಂದಾಗ ಚುಂಬನ, ತೆಕ್ಕೆಗಳ ಇಚ್ಛೆಯಾಗುವುದೂ ಉಂಟು. ಪುಣ್ಯಾರ್ಜನೆಯನ್ನೂ ಅವರು ಕಾಯುವದಿಲ್ಲ. ಆದರೆ, ರೋಹಿಣಿ ಒಂದು ವಿಷಯದಲ್ಲೂ ಅದರಂತೆ ನಡೆದುಕೊಂಡಿಲ್ಲ. ಮದುವೆಯಾದ ಮೇಲೆ ಅವನ ಸಾನ್ನಿಧ್ಯವನ್ನು ಅಪೇಕ್ಷಿಸಿ ಅವಳು ಬಂದುದೇ ಕಡಿಮೆ. ಬಂದಾಗಲೂ ತಲೆತಗ್ಗಿಸಿ ಅಷ್ಟು ದೂರ ನಿಲ್ಲುತಿದ್ದಳು. ಮಾತನಾಡಿಸಿದರೆ ಮೆಲ್ಲಗೆ ಉತ್ತರ ಕೊಡುತಿದ್ದಳು. ಆ ಸ್ವರ ಅವಳ ಕೊರಳಿನಿಂದ ಹೊರಟೊಡನೆಯೇ ಅವಳೂ ಹೊರಟಳು. ಅವಳ ಕಾಲುಂಗರ, ಬಳೆಗಳ ಸಪ್ಪಳ ಆಲಿಸಿದರೆ ಮಾತ್ರ ಕೇಳುತ್ತಿತ್ತು. ಲಜ್ಜೆಯೇ

ಘನೀ ರೂಪ ತಾಳಿ ರೋಹಿಣಿಯಾಗಿರಬೇಕೆಂದು ಅವನು ಭಾವಿಸಿದ್ದ. ಸ್ತ್ರೀ ರೂಪಕ್ಕೆ ಲಜ್ಜೆ ಹೂವಿಗೆ ಪರಿಮಳ ಇದ್ದಂತೆ. ಮತ್ತು ಅದರಿಂದ ಅವನ ಮನಸ್ಸಿಗೆ ಸ್ವಲ್ಪ ಹಿತವೇ ಆಗಿತ್ತು. ಆದರೆ ಅದು ಅವನ ಹತ ಸುಖದ ವಿಚಿತ್ರ ಚಿಹ್ನೆಗಳೆಂದು ಈಗ ಅವನ ಯೋಚನೆ.

ರೋಹಿಣಿಯ ನಡೆ ನುಡಿ ಆಶ್ಚರ್ಯಕರ. ಶಯ್ಯಾಗೃಹದಲ್ಲಿ ಮೊದಲಿನ ರಾತ್ರಿ ನಡೆದ ಘಟನೆಗಳೇ ಅದಕ್ಕೆ ಸಾಕ್ಷಿ. ಪುರುಷೋತ್ತಮ ಅವಳನ್ನು ಮುಟ್ಟಿದಾಗ ಕೈಗೆ ಹಿಮಸ್ಪರ್ಶವಾದಂತಾಯಿತು. ಅವಳ ಮೈ ನಡುಗುತಿತ್ತು. ಅಷ್ಟು ಸಂಕೋಚ, ಹೆದರಿಕೆಗಳಿದ್ದ ರೋಹಿಣಿ ಮರುದಿನ ಮುಂಜಾನೆ ಧೈರ್ಯದಿಂದ ಅವನ ಕೈಹಿಡಿದು ಕೆಳಗೆ ಕರೆದೊಯ್ದಳು ಒಂದೇ ಹಾಸಿಗೆಯಲ್ಲೂ ಅವಳು ಮಲಗಲಿಲ್ಲ. ಅನಾರೋಗ್ಯವಿದ್ದ ಹೆಂಡತಿ ಒಂದೇ ಹಾಸಿಗೆಯಲ್ಲಿ ಒರಗಬಾರದೇ ? ಉಸಿರಿನೊಂದಿಗೆ ಹಬ್ಬುವ ಸಾಂಸರ್ಗಿಕ ರೋಗವೇನೂ ಇಲ್ಲ ಅವಳಿಗೆ. ಕೆಳಗೆ ಜಮಖಾನೆಯ ಮೇಲೆ ಮಲಗಿಕೊಂಡಳು. ಎಲ್ಲಾದರೂ ಇದೆಯೇ ಈ ರೀತಿ ? ಏನು ಅವನ ಮೈಗೆ ತನ್ನ ಕೈಮೈ ಮುಟ್ಟೀತೆಂಬ ಅಂಜಿಕೆಯಿಂದ ದೂರ ಸರಿದಳೇ ? ಮರುದಿನ ತಾನೇ ಮುಟ್ಟಿದಳಲ್ಲ ! ಅವನು ಸ್ನಾನಕ್ಕಾಗಿ ಬಚ್ಚಲು ಕೊಟ್ಟಿಗೆಗೆ ತೆರಳಿದ್ದ. ಪರಿಮಳದ ಸಾಬೂನು, ಸ್ನಾನದ ಪಂಚೆ ಹಿಡಿದು ಕೊಂಡು ಬಂದಳು ಹಂಡೆಗೆ ನೀರು ತುಂಬಿಸಿ ನೀರಿಗೆ ಕೈಮುಳುಗಿಸಿ ಬಿಸಿ ಪರೀಕ್ಷಿಸಿದಳು. ಉತ್ತಮ ನೀರೆರೆದು ಕೊಂಡಾಗ, ' ಬೆನ್ನು ತಿಕ್ಕಬೇಕೆ ? " ಎಂದು ಕೇಳಿದಳು. ಅವನು ಉತ್ತರ ಕೊಡುವ ಮೊದಲೇ ಸೀರೆಯನ್ನು ಎತ್ತಿ ಕಟ್ಟಿಕೊಂಡು ಸಾಬೂನನ್ನು ತೆಗೆದುಕೊಂಡಳು. ಅವನು ಮಣೆಯ ಮೇಲೆ ಕುಳಿತ. ಭುಜಕ್ಕೆ, ಬೆನ್ನಿಗೆ ಸಾಬೂನು ಸವರಿ, ತಿಕ್ಕಿ, ನೊರೆ ಎಬ್ಬಿಸಿ ನೀರು ಎರೆದಳು. ಹೊಸಹೆಂಡತಿಯ ಸಂಕೋಚ ಏನೂ ತೋರಿಸಲಿಲ್ಲ. ಹತ್ತು ಹಡೆದವಳಷ್ಟು ನಿರ್ಭೀತಿ. ಪ್ರೀತಿಯಿಂದಲೇ ಮಾತನಾಡಿಸಿದಳು:

" ಮಕ್ಕಳಂತೆ ನಿಮಗೂ ಬೆನ್ನು ತಿಕ್ಕಿಸಿಕೊಳ್ಳಬೇಕೆಂದು ಆಶೆಯಾಗುತ್ತದಲ್ಲವೇ ? "

" ಅದೊಂದೇ ಅಲ್ಲ " ಎಂದು ಅವನು ಗೂಢಾರ್ಥದ ಉತ್ತರ ಕೊಟ್ಟಿದ್ದ. ಅವಕ್ಕೆ, " ಮದುವೆಯಾಗುವ ಮೊದಲು ಏನು ಮಾಡುತಿ

ದ್ದಿರಿ? '' ಎಂದು ಅವಳು ಕೇಳಿ ಅವನ ಬಾಯಿ ಕಟ್ಟಿಸಿ ಬಿಟ್ಟಿದ್ದಳು. ಅವಳ ಇದಿರಿನಲ್ಲಿ ಅವನ ನಾಲಿಗೆಯೇ ಹೊರಡುವುದಿಲ್ಲ. ಅವಳ ಪ್ರಶ್ನೆ ಗಳಿಗೂ ವಿಚಾರ ಮಾಡಿ ಉತ್ತರ ಕೊಡಬೇಕಾಗುತ್ತದೆ. ಚಾಹಾಕ್ಕೆ ಕರೆಯಲು ಬಂದಾಗ ಅವಳು ಏನೇನು ಕೇಳಿದಳು ? ಅಬ್ಬಾ ! ಎಲ್ಲ ಅನೇಕ ಅರ್ಥಗಳುಳ್ಳ ಪ್ರಶ್ನೆಗಳು ! ಅವೆಲ್ಲ ಅಕ್ಷರಶಃ ಈಗ ಅವನ ಸ್ಮರಣೆಯು ಳ್ಳಿಲ್ಲ. ನಿಜ. ಆದರೆ ಅದರ ಭಾವಾರ್ಥ ಮರೆತು ಹೋಗಿಲ್ಲ. ಅವುಗಳ ಇಂಗಿತವೇನೆಂದು ಈಗಲೂ ಯೋಚಿಸುತ್ತಿದ್ದಾನೆ.

ಹಾಗೆ ಯೋಚಿಸುತ್ತ "ರೋಹಿಣಿ ನಿಜವಾಗಿಯೂ ಸ್ತ್ರೀಯಾಗಿರ ಬಹುದೇ ಇಲ್ಲವೇ?'' ಎಂದೂ ಒಂದು ಸಂಶಯ ಪಿಶಾಚಿ ಪುರುಷೋತ್ತಮನ ತಲೆಯೊಳಗೆ ಪ್ರವೇಶಿಸಿತು. "ಛೇ, ಇದೆಂತಹ ಸಂದೇಹ" ವೆಂದು ಮತ್ತೆ ಅದನ್ನು ಹೊಡೆದೋಡಿಸಿದ. ಏಕೆಂದರೆ, ರೋಹಿಣಿಯನ್ನು ಕಂಡಾಗ ಯಾರಿಗೂ ಅಂಥ ಸಂಶಯ ಬರಲಾರದು. ಶೋಭಾಯಮಾನವಾದ ಕೇಶ ರಾಶಿಯಿದೆ. ಅಂದ ಅಂಗಲವಾದ ಮುಖ. ಉಬ್ಬಿದ ಗುಲಾಬಿ ಬಣ್ಣದ ಕೆನ್ನೆಗಳು. ರವಕೆ, ಸೀರೆಗಳೂ ದೊಡ್ಡ ದಾಳಿಂಬದಂತಹ ಅವಳ ಕುಚ ಗಳನ್ನು ಮರೆಸಿಲ್ಲ. ಸ್ತ್ರೀ ಸಹಜವಾದ ಲಜ್ಜೆ, ಭಯ, ಬೆಡಗು ಬಿನ್ನಾಣ ಗಳಿಗೂ ಕೊರತೆಯಿಲ್ಲ. ಛೇ,ಅದು ಅಶಕ್ಯ. ಹೆಣ್ಣಿನ ಕಡೆಯವರು ಆ ರೀತಿ ತನ್ನನ್ನು ವಂಚಿಸಿರಲಿಕ್ಕಿಲ್ಲ. ವಂಚಿಸಲಾರರು. ಅವರು ಪರವೂರಿನವರಲ್ಲ. ಮನೆಮಾರು ಆಸ್ತಿಪಾಸ್ತಿವುಳ್ಳ ಹೆಸರಾದ ಮನೆತನ ಅವರದು. ಮಾನ ಮರ್ಯಾದೆಯುಳ್ಳ ವಂಶ. ರೋಹಿಣಿ ಯಲ್ಲದೆ ಬೇರೆ ಹುಡುಗರೂ ಹುಡುಗಿ ಯರೂ ಇದ್ದಾರೆ. ಕೆಲವರು ಕೆಲಸದಲ್ಲಿರುವರು. ಒಬ್ಬಿಬ್ಬರು ಹುಡು ಗಿಯರಿಗೆ ಮದುವೆಯಾಗಿ ಮಕ್ಕಳೂ ಆಗಿವೆ. ತಂದೆಗೆ ಅವರ ಹುಟ್ಟು ಕುಲಗೋತ್ರಗಳೆಲ್ಲ ಗೊತ್ತು. ವಂಚಿಸಿ ಅವರು ಮಾನ ಉಳಿಸಿಕೊಳ್ಳ ವಂತಿಲ್ಲ. ಅದನ್ನು ಅವರು ತಿಳಿಯದ ದಡ್ಡರಲ್ಲ.

ಒತ್ತಾಯದಿಂದ ಲಗ್ನ ಮಾಡಿದರೆ ? ಯಾವುದಕ್ಕಾಗಿ ಒತ್ತಾಯ ? ಏಕೆ ಅವಳಿಗೆ ಮದುವೆಯಾಗಲು ಮನಸ್ಸೇ ಇದ್ದಿಲ್ಲವೇನು ? ಅಥವಾ ಪುರುಷೋತ್ತಮನನ್ನು ಅವಳು ಮೆಚ್ಚಲಿಲ್ಲವೇ ? ಎರಡೂ ತೀರ ಅಸ್ವ ಭಾವಿಕ. ಮದುವೆಯಾಗಲು ಬಯಸದ ಹೆಣ್ಮಕ್ಕಳು ಸಾವಿರಕ್ಕೊಬ್ಬರೂ

ಇಲ್ಲ. ಅವಳು ಹಿರಿವಯಸ್ಸಿನವಳಲ್ಲ. ಇನ್ನೂ ಎಳೆಬಾಳೆ ಜೀವನದ ಚಳಿ ಗಾಳಿ ಮಳೆ ಬಿಸಿಲನ್ನು ಕಂಡಿಲ್ಲ. ಜೀವನದಲ್ಲಿ ಜಿಗುಪ್ಸೆ ಬರುವಂತಹ ಕಾರಣಗಳಿಲ್ಲ. ಅಲ್ಲದೆ, ಮೆಚ್ಚಿಕೆಗೆ ಪಾತ್ರನಾಗದಂತಹ ವ್ಯಕ್ತಿತ್ವವೂ ಪುರುಷೋತ್ತಮನದಲ್ಲ. ಎಳ್ಳುಹೂವಿನಂತಹ ಬಣ್ಣ. ವಿಶಾಲವಾದ ಹಣೆ. ದಟ್ಟ ಹುಬ್ಬುಗಳು. ಬೊಗಸೆಗಣ್ಣುಗಳು. ದುಂಡಗಾದ ಮುಖ. ಅಚ್ಚುಕಟ್ಟಾದ ಮೈ. ಉದ್ದಕ್ಕೆ ತಕ್ಕ ತೋರ ವಯಸ್ಸೂ ಮೀರಿಲ್ಲ. ಅವನಿಗೆ ಯಾರೂ ಹುಡುಗಿ ಕೊಟ್ಟಾರು ! ಯಾವ ಹುಡುಗಿಯೂ ಕೈ ಹಿಡಿದಾಳು ಅವನು ಮನ್ಮಥನಲ್ಲದಿದ್ದರೂ ಕುರೂಪಿಯಲ್ಲ. ಅವನಿಗಿಂತ ರೂಪವಂತರು ಜಗತ್ತಿನಲ್ಲಿ ಇರಬಹುದು. ಇದ್ದಾರೆ. ಜಗತ್ತಿನಲ್ಲಿ ಒಬ್ಬರನ್ನು ಕಂಡು ಮತ್ತೊಬ್ಬರನ್ನು ನೋಡಿದಾಗ ಮೊದಲಿನವರು ಒಪ್ಪಾಗಿ ಕಾಣದಿರುವುದೂ ಇದೆ. ಆದರೆ, ರೋಹಿಣಿ ಹಾಗೆ ತಿಳಿದುಕೊಂಡಿದ್ದರೆ ಉತ್ತಮನನ್ನು ಲಗ್ನವಾಗಲು ಮನಸ್ಸಿಲ್ಲವೆಂದು ಹೇಳುತಿದ್ದಿಲ್ಲವೇ? ಹೇಳಲಾರದ ಮೂಕಿ ಹೆಣ್ಣಲ್ಲ ಅದು. ಹೆಡ್ಡೂ ಅಲ್ಲ. ಓದು ಬರಹ ಕಲಿತವಳು ಶಾಲೆ ಪುಸ್ತಕಗಳನ್ನು ಮಾತ್ರವಲ್ಲ ಬೇರೆ ಗ್ರಂಥಗಳನ್ನೂ ಅವಳು ವಿಶೇಷ ಓದಿದಂತೆ ತೋರುತ್ತದೆ. ಬುದ್ಧಿ ಬಹಳ ಚುರುಕು. ಅನುಭವವೂ ವಿಶಾಲ. ಮಾತಿನಲ್ಲಿ ಜಾಣ್ಮೆಯೂ ಇದೆ. ಅದು ಹೊಳೆದುದರಿಂದಲೇ ಆಶ್ಚರ್ಯದಿಂದ, "ರೋಹಿಣೀ ನೀನು ಎಲ್ಲಿಯ ವರೆಗೆ ಓದಿದ್ದೀಯಾ ?" ಎಂದು ಅವನು ಪ್ರಶ್ನಿಸಿದ್ದ.

ರೋಹಿಣಿ ಕಲಿತವಳೆಂದು ಸ್ಮರಿಸಿಕೊಂಡೊಡನೆಯೇ ಮತ್ತೊಂದು ವಿಚಾರ ಅವನ ತಲೆಯೊಳಗೆ ನುಸುಳಿತು. ಶಾಲೆಗೆ ತೆರಳಿದಾಗ ಅವಳು ಯಾರನ್ನಾದರೂ ಪ್ರೀತಿಸಿದಳೇ ? ಯಾರ ಪ್ರೀತಿಗಾದರೂ ಅವಳು ಪಾತ್ರಳಾದಳೇ ? ಇದು ಅಸಂಭವವೇನೂ ಅಲ್ಲ. ಉತ್ತಮ ಶಾಲೆಗೆ ತೆರಳುತಿದ್ದಾಗ ಇಂತಹ ಅನೇಕ ಪ್ರಣಯ ಪ್ರಸಂಗಗಳನ್ನು ಕೇಳಿದ್ದ. ಧಾರವಾಡದಲ್ಲಿ ಕಾಲೇಜು ಬಿಟ್ಟೊಡನೆಯೇ ಹುಡುಗರಿಗೆ ಓಣಿ ಓಣಿ, ರಸ್ತೆ ರಸ್ತೆ ತಿರುಗುವುದೇ ಹವ್ಯಾಸ. ಒಂದು ಅಂದವಾದ ಹಕ್ಕಿ ಕಣ್ಣಿಗೆ ಬಿದ್ದರೆ ಸಾಕು; ಗಂಡು ಪಾರಿವಾಳಗಳಂತೆ ಗುಟುರು ಹಾಕ ತೊಡಗಿದರೇ. ಹೋದ ಹೋದಲ್ಲಿ ಸಾವಿರ ಕಣ್ಣುಗಳು ನೋಡುತ್ತಿರುತ್ತವೆ. ಹೋದ

ಹೋದಂತೆ ಹಿಂದಿನಿಂದ ತಂಡೋಪತಂಡವಾಗಿ ಅನುಸರಿಸುವರು. ರಸ್ತೆಗಳು ಕವಲೊಡೆವಲ್ಲಿ, ಹೂವಿನ ಮಾರ್ಕೇಟಿನಲ್ಲಿ, ಮತ್ತೆ ಒಂದೊಂದು ಗುಂಪುಗಳು! ಎಲ್ಲರ ಕಣ್ಣುಗಳಲ್ಲಿಯೂ ನುಂಗುವ ದೃಷ್ಟಿ! ಬಿಸಿಲಿನ ತಾಪ ಕಡಿಮೆಯಾದಾಗಲೇ ಯೌವನಕ್ಕೆ ಕಾತರದ ಎಳೆಬಿಸಿಲಿನ ಉರಿ ಉಂಟಾಗುತ್ತದೋ ಏನೋ! ಹುಡುಗ ಹುಡುಗಿಯರನ್ನು ಮೋಹಿಸಲು ಧಾರವಾಡದ ಸಿನಿಮಾ ಥಿಯೇಟರುಗಳಿಗೂ "ರೋಮಿಯೋ- ಜೂಲಿಯಟ್'' ದಂತಹ ವಾಕ್ಪಟಗಳೇ ಹೆಚ್ಚಾಗಿ ಬರುತ್ತಿವೆ ಅದನ್ನು ಕಂಡವರು ದುಷ್ಯಂತ—ಶಕುಂತಲೆಯರ ಪಾತ್ರಗಳನ್ನು ಅಭಿನಯಿಸಲು ಬಯಸುವುದು ಆಶ್ಚರ್ಯವೇನೂ ಅಲ್ಲ. ಧಾರವಾಡದ ಸಂದುಗೊಂದುಗಳಲ್ಲಿ ತಲೆ ಎತ್ತಿನಿಂತಿರುವ ಕಲ್ಲು ಮರಗಳಿಗೆ ಬಾಯಿ ಬರುತಿದ್ದರೆ ಅವು ಲೆಕ್ಕವಿಲ್ಲದಷ್ಟು ಪ್ರಣಯ ಕಥೆಗಳನ್ನು ಹೆಣೆದು ಹೇಳುವುದರಲ್ಲಿ ಸಂಶಯವಿಲ್ಲ.

ರೋಹಿಣಿಯ ಕಥೆಯನ್ನು ಹೇಳುವವರು ಯಾರು? ಕಥೆಯಿರಲೇ ಬೇಕು. ಕಾರಣವಿಲ್ಲದೆ ಯಾರೂ ವ್ಯಥೆಪಡುವುದಿಲ್ಲ. ಯಾಕೋ ಅವಳು ಶೋಕಿಸುತಿದ್ದಾಳೆ. ಯಾವುದೋ ದುಃಖ ಅವಳ ಹೃದಯದಲ್ಲಿ ಅಡಗಿದೆ. ಏನೋ ಅವಳ ಮನಸ್ಸನ್ನು ನೋಯಿಸಿದೆ. ಮೋರೆಯಲ್ಲಿ ಆ ಚಿಂತೆಯ ಚಿಹ್ನೆಗಳಿವೆ. ಆದುದರಿಂದಲೇ ಅವಳ ನಡೆ ನುಡಿ ಅವನಿಗೆ ಒಂದು ಒಗಟಾಗಿದೆ. ಅದನ್ನು ಬಿಡಿಸುವ ಬಗೆ ಹೇಗೆಂದು ಉತ್ತಮನ ಆಲೋಚನೆ. ಪತ್ರ ಬರೆದು ಕೇಳಬೇಕೆಂದು ನಿಶ್ಚಯಿಸಿದ. ಒಂದೆರಡು ಸಲ ಪತ್ರ ಬರೆಯಲೂ ಮೇಜಿನ ಬಳಿ ಕುಳಿತ. ಎರಡು ಮೂರು ಸಾಲು ಬರೆದ ಮೇಲೆ ಕೈ ಮುಂದೆ ಓಡಲಿಲ್ಲ. ಏನೆಂದು ಬರೆಯಬೇಕು? ತನ್ನ ದೌರ್ಬಲ್ಯವನ್ನು ಚಿತ್ರಿಸುವುದೇ? ಅದು ಅವನಿಗೆ ಇಷ್ಟವಿಲ್ಲ. ಆದುದರಿಂದ ಬರೆದುದನ್ನು ಹರಿದೊಗೆದ. ಮತ್ತೊಮ್ಮೆ ಸಿಟ್ಟಿನ ಆವೇಶದಲ್ಲಿ ಏನನ್ನೋ ಗೀಚಿದ. ಅದನ್ನು ಪುನಃ ಓದಿದ ಮೇಲೆ ಅಂಚಿಗೆ ಹಾಕಲು ಹಿಂಜರಿದ. ದುಃಖಿತ ಹೃದಯಕ್ಕೆ ಬರೆ ಕೊಡುವುದೇ? ಅವಳ ಮೇಲೆ ಮುಯ್ಯ ತೀರಿಸಿಕೊಳ್ಳುವುದೇ? ಯಾವುದೂ ಬಗೆಹರಿಯದೆ ಪತ್ರ ಬರೆಯುವುದನ್ನೇ ಬಿಟ್ಟುಬಿಟ್ಟ. ಅವಳಿಗಾಗಿ ತನ್ನ ಹೃದಯವನ್ನೇ ಹಿಚುಕಿಕೊಂಡ. ಅವಳಿಗಾಗಿ ತನ್ನ ರೋಷ ಆವೇಶಗಳನ್ನು ಹತ್ತಿಕ್ಕಿಕೊಂಡ. ಆದರೆ ಅವನ ಕಾರ್ಯಾಚರಣೆ

ಯಲ್ಲಿ ಅದರ ದುರ್ಗಂಧ ಹೊರಹೊಮ್ಮ ತೊಡಗಿತು.

ಆಫೀಸಿನಲ್ಲಿಯೂ ಅನೇಕರು ಅದನ್ನು ಮೂಸಿದರು. ಯಾರೊಡನೆಯೂ ಹೆಚ್ಚು ಮಾತನಾಡಲಾರ. ಸಿಟ್ಟೊ ಮೂಗಿನ ತುದಿಯಲ್ಲಿ ಬಂದು ಕೂತಿದೆ. ಬರೆಯುತ್ತ ಕೈ ಅಲ್ಲೇ ನಿಂತು ಬಿಡುವುದೂ ಉಂಟು. ಗಂಟೆಯಾದ ಮೇಲೂ ಒಮ್ಮೊಮ್ಮೆ ಬರೆಯುತ್ತ ಕೂತಿರುತ್ತಾನೆ. ಹಣೆಗೆ ಎಡಗೈ ಇಟ್ಟುಕೊಂಡು ಸುಮ್ಮಗೆ ತಲೆತಗ್ಗಿಸಿ ಕುಳಿತು ಬಿಡುವುದೂ ಇದೆ. "ಪುರುಷೋತ್ತಮ ತುಂಬ ಬದಲಾಗಿದ್ದಾನೆ" ಎಂದು ಆಫೀಸಿನಲ್ಲಿ ಆಡಿಕೊಳ್ಳುವರು. "ಧಾರವಾಡ ಎಳೆಯುತ್ತಿದೆ ಅವನನ್ನು" ಎಂದು ಪಿಸುಗುಟ್ಟುವರು. ಆ ಮಾತು ಮಾಸ್ತರರ ಕಿವಿಗಳಿಗೂ ಮುಟ್ಟಿವೆ. ಅವರು ಉಲ್ಲಾಸದಿಂದಿದ್ದಾಗ, "ಏ, ನಮ್ಮ ಉತ್ತಮ ರಾಯರಿಗೆ ಯಾರಾದರೂ ಬೇಗನೇ ಒಂದು ಮನೆ ನೋಡಿರಪ್ಪಾ" ಎಂದು ಲಹರಿ ಎಬ್ಬಿಸುವರು.

"ಇನ್ನು ಎಷ್ಟುಕಾಲದ ವರೆಗೆ ಸಾರ್? ಧಾರವಾಡಕ್ಕೆ ವರ್ಗ ಮಾಡಬೇಕೆಂದು ಅರ್ಜಿ ಬರೆದಿದ್ದಾರೆ. ಇಂದೋ ನಾಳೆಯೋ ಬಂದರೆ ಹೊರಟರೇ" ಎಂದು ಯಾರಾದರೊಬ್ಬರು ಉತ್ತರ ಕೊಡುವರು.

"ಧಾರವಾಡಕ್ಕೆ ವರ್ಗಮಾಡಿಸಿಕೋ" ಎಂದು ತಂದೆಯವರೂ ಒತ್ತಾಯ ಮಾಡುತಿದ್ದರು. ಮದುವೆಯಾದ ಮೇಲೆ ಅವನಿಗೂ ಅದು ಹಿತಕರವೆಂದು ನಂಬಿ ಅರ್ಜಿ ಬರೆದ. ಆದರೆ ಈಗ ಅವನ ಮನೋವೃತ್ತಿಯೇ ಬದಲಾಗಿದೆ. "ಅರ್ಜಿ ಬರೆದುದು ಆಗಲಿಲ್ಲ" ಎಂದು ಪರಿತಾಪ ಪಡ ತೊಡಗಿದ. ಏಕೆಂದರೆ, ಧಾರವಾಡಕ್ಕೆ ತೆರಳಲು ಅವನಿಗೆ ಸ್ವಲ್ಪ ಹೆದರಿಕೆಯಾಗಿದೆ. ರೋಹಿಣಿಯೊಡನೆ ಬಾಳ್ವೆ ಸುಗಮ ನಡೆದೀತೆಂಬ ಭರವಸೆಯಿಲ್ಲ. ಮನಸ್ತಾಪ ಬೆಳೆದು ಜಗಳವಾಗುವ ಸಂಭವವೂ ಇದೆ. ತಾಯಿ ತಂದೆ ಬಂಧುಬಳಗದವರಿಗೂ ಗೊತ್ತಾಗಬಹುದು. ಮತ್ತು ಅದರಿಂದ ಅವನ ಜೀವನ ಇನ್ನಷ್ಟು ದುಃಖಮಯವಾಗ ಬಹುದು. ಆದುದರಿಂದ ಅದಷ್ಟು ಈ ಪ್ರಕರಣವನ್ನು ರಹಸ್ಯವಾಗಿಡಲು ಅವನ ಇಚ್ಛೆ. ದೂರದಲ್ಲಿದ್ದರೆ ಅದು ಸಾಧ್ಯವೂ ಇದೆ. ಆದುದರಿಂದ, ಒಂದಲ್ಲದಿದ್ದರೆ ಇನ್ನೊಂದು ಕಾರಣದಿಂದ ವರ್ಗಾವರ್ಗಿಯ ಅರ್ಜಿಯನ್ನು ಹಿರಿ ಅಧಿಕಾರಿಗಳು ನಿರಾಕರಿಸಿದರೆ ಉತ್ತಮವೆಂದು ಪುರುಷೋತ್ತಮ ಹಾರೈಸಲಾರಂಭಿಸಿದ.

# ಐದನೆಯ ಅಧ್ಯಾಯ

ರೋಹಿಣಿ ಹೇಗಿದ್ದಾಳೆ? ಮದುವೆಯಾಗಿ ಮನೆಗೆ ಬಂದಾಗ ಹೇಗಿದ್ದಳೋ ಈಗಲೂ ಹಾಗೆಯೇ ಇದ್ದಾಳೆ. ಶಾಂತ ಮತ್ತು ಗಭೀರ. ಅವಳ ಮಾತಿನಲ್ಲಾಗಲೀ ನಡತೆಯಲ್ಲಾಗಲೀ ವಿಶೇಷ ವ್ಯತ್ಯಾಸವೇನೂ ಇಲ್ಲ. ಮೋರೆ ಸ್ವಲ್ಪ ಕಳೆಗುಂದಿದೆ. ಉತ್ತವು ಇಲ್ಲದಿದ್ದುದರಿಂದ ಅದು ಸಹಜವೆಂದು ಅತ್ತೆಮಾವ ತಿಳಿದುಕೊಂಡಿದ್ದಾರೆ. ಅವರೊಡನೆ ಅವಳ ವರ್ತನೆ ಅತ್ಯಂತ ನಮ್ರ ಹಾಗೂ ಸ್ನೇಹ ಪೂರ್ಣವಾಗಿಯೇ ಇದೆ. ಅವರ ಸೇವಾಕಾರ್ಯದಲ್ಲಿ ಎಳ್ಳಷ್ಟು ಚ್ಯುತಿಯಿಲ್ಲ. ಮನೆಕೆಲಸದಲ್ಲೂ ಅಸಡ್ಡೆ ತೋರಿಸಿಲ್ಲ. ಅತ್ತೆಗೆ ತುಂಬಾ ಸಹಾಯಕಳಾಗಿರುವಳು. ಅತ್ತೆ ಮಾವಂದಿರಿಗೆ ಅವಳು ತುಂಬಾ ಪ್ರಿಯಳಾಗಿದ್ದಾಳೆ.

ಮುಂಜಾನೆ ಹಾಸಿಗೆಯಲ್ಲೇ “ಬೆಡ್‌ಟೀ” ಕುಡಿಯುವುದು ನಾರಾಯಣರಾಯರ ಚಟ. ಅದಕ್ಕಾಗಿ ಗಂಗಮ್ಮನವರು ಬೇಗನೇ ಹಾಸಿಗೆ ಬಿಡುವರು. ಸೊಸೆ ಬಂದ ಮೇಲೆ ಅವಳೂ ಅಷ್ಟೇ ಹೊತ್ತಿಗೆ ಏಳಲಾರಂಭಿಸಿರುವಳು. “ಇನ್ನೂ ಸರಿ ಬೆಳಗಾಗಿಲ್ಲ. ನೀನು ಮಲಗಿಕೋ. ನನಗಾದರೆ ವಯಸ್ಸಾಗಿದೆ. ನಿದ್ದೆ ಕಡಿಮೆ. ಬೆಳಗಿನಜಾವಕ್ಕೆ ಎಚ್ಚರವೂ ಆಗುತ್ತದೆ ಅನೇಕ ವರುಷಗಳಿಂದ ಎದ್ದು ಎದ್ದು ರೂಢಿಯೂ ಆಗಿದೆ. ನೀನೇಕೆ ಏಳುತ್ತಿ? ಹೋಗು. ಮಲಗು” ಎಂದು ಹೇಳಿದರೂ ಕೇಳಲಿಲ್ಲ. ದಿನಂಪ್ರತಿ ಅಷ್ಟು ಹೊತ್ತಿಗೆ ಎದ್ದು ಬರುವುದನ್ನು ಬಿಡಲಿಲ್ಲ. ಬಂದು ತಾನೇ “ಸ್ಟೋವ್” ಹಚ್ಚಿ ಚಹಾ ತಯಾರಿಸುವಳು. “ಸ್ಟೋವ್” ಬುಸುಗುಟ್ಟುವಾಗಲೇ ನಾರಾಯಣರಾಯರ ಕೋಣೆಯೊಳಗಿಂದ “ಹೆಂ, ಹೆಂ” ಎಂದು ಗಂಟಲು ಸರಿಪಡಿಸುವ ಹಾಗೂ ಸೀನುವ ಶಬ್ದ ಅಡಿಗೆ ಕೋಣೆಯ ವರೆಗೂ ಕೇಳಿಸುತ್ತದೆ. ಆಗ, ಅತ್ತೆ—ಸೊಸೆ ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿ ಕುಲು ಕುಲು ನಗುವರು.

ಈ ರೀತಿ ಅವರು ದಿನನಿತ್ಯ ನಗುವ ಸಂದರ್ಭಗಳು ಅನೇಕ ಇವೆ. ಹಾವೇರಿ ಕಲಘಟಗಿ ಮೊದಲಾದ ಕಡೆ ತಾವಿದ್ದಾಗ ನಡೆದ ಘಟನೆ, ಕಂಡ ಜನ, ಪಟ್ಟ ಅನುಭವಗಳನ್ನು ಅತ್ತೆಯವರು ವಿವರಿಸಿ ನಗಿಸುವ ನುಡಿಗಳನ್ನು ಆಡುವುದೂ ಉಂಟು. ಕೆಲವು ವೇಳೆ ಪರರ ಮನೆಯ ಆಗು ಹೋಗುಗಳೂ ನಗುವಂತಹ ಸ್ವಾರಸ್ಯಮಯವಾಗಿರುತ್ತವೆ. ಮಾವಯ್ಯ ನವರು ಬೇಸಿಗೆಯಲ್ಲೂ ಮುಂಜಾನೆ ಗಾಳಿ ಸವಾರಿಗೆ ಹೊರಟಾಗ ಮಫ್ಲರ್ ಮತ್ತು ಕಾಲು ಚೀಲ ಧರಿಸುವುದನ್ನು ಕಂಡು ಅವಳು ನಗುವಳು. ಊಟಕ್ಕೆ ಕುಳಿತಾಗ ಅವರೂ ಏನಾದರೊಂದು ಸರಸೋಕ್ತಿ ಚೆಲ್ಲಿ ಎಲ್ಲರನ್ನೂ ನಗೆ ಗಡಲಿಗೆ ನೂಕುವರು. ಊಟವಾದ ಮೇಲೆ ಮಲಗುವ ನಾರಾಯಣ ರಾಯರು ಗೊರಕೆ ಹೊಡೆಯುವರು. " ಹುಂ. ನಡುಹಗಲಿನಲ್ಲೂ ಗೊರಕೆ! ಕುಂಭಕರ್ಣ '' ಎಂದು ಗಂಗಮ್ಮನವರು ಹೇಳಿ ನಗಿಸುವರು. ಹೀಗೆ ಅತ್ತೆ ನಕ್ಕಾಗ ಮತ್ತು ಅತ್ತೆ ನಕ್ಕಾಗಲೆಲ್ಲ ರೋಹಿಣಿಗೂ ನಗು ಬರುತ್ತದೆ. ಹೌದು ರೋಹಿಣಿ ನಗುತಿದ್ದಾಳೆ.

ಆದರೆ ಅವಳು ಅಳುತ್ತಿರುವುದೂ ನಿಜ. ಅತ್ತೆ ಮಧ್ಯಾಹ್ನ ಒಮ್ಮೊಮ್ಮೆ ವಿಶ್ರಾಂತಿ ತೆಗೆದು ಕೊಂಡಾಗ ರೋಹಿಣಿ ತಾನೂ ಮನೆಯ ಅಟ್ಟದ ಮೇಲೆ ಏರಿ ಬರುವಳು. ಬಾಗಿಲಿಕ್ಕಿಕೊಂಡು ಕಸೂತಿ ಕೆಲಸದಲ್ಲು ವ್ಯಾಸಕ್ತ ಳಾಗುವಳು. ತಲೆದಿಂಬಿನ ಕವರ್, ಮೇಜಿನ ಹೊದಿಕೆ, ಕಿಟಕಿ ಬಾಗಿಲು ಗಳ ಪರದೆ, ಲೋಡಿನ ಬಿಳಿಬಟ್ಟೆ, ಕರವಸ್ತ್ರಗಳಲ್ಲೆಲ್ಲ ನಾನಾ ಬಣ್ಣದ ನಾನಾ ಹೂವುಗಳನ್ನು ಬಣ್ಣದ ನೂಲುಗಳಿಂದ ಹೆಣೆದು ಚಿತ್ರಿಸುವಳು. ಆದರೆ ಹಾಗೆ ಕುಳಿತಾಗ ಒಮ್ಮೊಮ್ಮೆ ಅವಳ ಕೈ ಅರ್ಧದಲ್ಲೇ ನಿಂತು ಹೋಗುತ್ತದೆ. ಹೂವಿನ ಚಿತ್ರದ ಬದಲು ಮನುಷ್ಯರೂಪ ಅವಳ ಕಣ್ಣಿಗೆ ಬಿದ್ದಂತಾಗುತ್ತದೆ. ಅದನ್ನೇ ನೋಡುತ್ತ ಹೋದಂತೆ ಅವಳಿಗೆ ಏನೂ ಕಾಣುವುದಿಲ್ಲ. ಬಿಳಿ ಬಟ್ಟೆಯ ಮೇಲೆ ಕಣ್ಣೀರಿನ ಹನಿಗಳು ಮಳೆಯ ಒಂದೊಂದು ಸೆಳಕುಗಳಂತೆ ಬೀಳುತ್ತವೆ. ರಾತ್ರಿ ಅಟ್ಟದ ಮೇಲೆ ಮಲಗಿ ಕೊಂಡಾಗ ಈ ಸೆಳಕುಗಳು ಧಾರಾಕಾರವಾಗಿ ಇಳಿಯುತ್ತವೆ. ಆದರೆ, ಅವಳು ಅತ್ತುದುದು ಯಾರಿಗೆ ಗೊತ್ತಾಗುತ್ತದೆ ?

ಮನುಷ್ಯರ ಸುಖದುಃಖ, ಹಾನಿಹರಿಬ, ಕಷ್ಟನಷ್ಟಗಳು ಸರ್ವ

ಸಾಮಾನ್ಯವಾಗಿ ಅವರ ಮುಖ, ನಡೆ ನುಡಿಗಳಿಂದ ಕಂಡು ಹಿಡಿಯಲು ಸಾಧ್ಯವಿದೆ. ಕಾಮ, ಪ್ರೇಮ, ರಾಗ ದ್ವೇಷಾದಿ ಮನೋವಿಕಾರಗಳನ್ನು ಬಹು ಕಾಲ ಬಚ್ಚಿಟ್ಟು ಕೊಳ್ಳುವುದೂ ಬಲು ಕಠಿಣ. ಅಂತಹ ಜನ ಬಹಳ ವಿರಳ. ಆದರೆ ಸ್ತ್ರೀಯರು ಇದಕ್ಕೆ ಅಪವಾದವಾಗಿರುವುದೂ ಇದೆ. ಮುಖ ಚರ್ಯೆಯಿಂದಾಗಲೀ, ಮಾತಿನಿಂದಾಗಲೀ, ನಡತೆಯಿಂದಾಗಲೀ ಅವರ ಹೃದಯದ ದಿಗ್ದರ್ಶನ ಅಶಕ್ಯವಿದೆ. ಹಡೆದ ತಾಯಿ ತಂದೆಗೆ ಅವರು ತಿಳಿಸದ ವಿಷಯಗಳಿವೆ. ಕೈಹಿಡಿದ ಪತಿಯ ಮುಂದೆಯೂ ಎದೆಗೆ ಸೀರೆ ಯನ್ನೆಳೆದುಕೊಂಡಂತೆ ಹೃದಯದ ಪರೆಯನ್ನು ಮುಚ್ಚುವರು. ಕಾಮ ಪ್ರೇಮಗಳನ್ನು ಅವರು ಅಂದು ತೋರಿಸುವುದಿಲ್ಲ. ಅವರ ಹಾವಭಾವ ಗಳಲ್ಲಿ ಲವಲೇಶವೂ ಗೊತ್ತಾಗಲಾರದು. ಅವರ ಮನಸ್ಸಿನಲ್ಲಿ ಏನಿದೆ ಏನಿಲ್ಲ ಎಂದು ಹೆಕ್ಕಿ ಬಿಡಿಸುವುದು ದುಸ್ತರ. ಹರಿವ ನದಿಯ ಮಧ್ಯೆ ಒಂದೊಂದು ಕಡೆ ಇರುವ ಕೆರೆಯಂತೆ ತೋರಿಕೆಗೆ ಅವರು ಗಭೀರ ರಾಗಿ ರುವರು. ನದಿಯ ಆ ಕೆರೆಯಂತಹ ತಗ್ಗು ಸ್ಥಳದಲ್ಲಿ ನೀರು ಹರಿದಂತೆಯೇ ಕಾಣಿಸುವುದಿಲ್ಲ. ನಿಂತ ನೀರಿನಂತೆ ತೋರುತ್ತದೆ. ಹರಿವ ಸಪ್ಪಳವಿಲ್ಲ. ಕಲ್ಲುಗಳ ಉರುಳಾಟದ ಕರಕರ ಕರಕರೆಯಿಲ್ಲ. ಅಲೆಗಳಿಲ್ಲ. ದಂಡೆಯ ಮೇಲೆ ನಿಂತವರಿಗೆ ಎಲ್ಲ ಶಾಂತವಾಗಿ ತೋರುತ್ತದೆ. ಆದರೆ ಅಂಥ ಸ್ಥಳಗ ಳಲ್ಲಿ ಒಂದೊಂದು ಕಡೆ ನೆಲವೇ ಇಲ್ಲ! ಅದರ ತಳದಲ್ಲಿ ನೆಗಳ್ ಇರು ವುದೂ ಉಂಟು. ಒಳಗೆ ನೀರು ಸುಳಿಸುಳಿಯಾಗಿಯೂ ಹರಿಯುತ್ತಿರುತ್ತದೆ. ರೋಹಿಣಿಯ ಸ್ಥಿತಿ ಹೀಗಾಗಿದೆ. ವ್ಯಥೆ ಅವಳ ಹೃದಯವನ್ನು ಒಳಗಿಂದೊ ಳಗೆ, ಯಾವ ಸಪ್ಪನ್ನೂ ಮಾಡದೆ ಕೊರೆಯುತ್ತಿದೆ. ಅವಳು ಕೊರಗು ತಿದ್ದಾಳೆ.

ಹೋದ ಉತ್ತಮ ಒಂದು ಪತ್ರವನ್ನೂ ಬರೆಯಲಿಲ್ಲ. ಪತ್ರ ಬರುತಿ ದ್ದರೆ ಅದರ ಒಕ್ಕಣೆಗನುಗುಣವಾಗಿ ಅವಳು ಉತ್ತರವನ್ನು ಬರೆಯುತಿ ದ್ದಳು. ಅವನು ಸಮೀಪ ವಿದ್ದಾಗ ಹೇಳಲು ನಾಲಿಗೆ ಹೊರಳುತಿದ್ದಿಲ್ಲ. ಹೇಳಬೇಕಾಗಿದ್ದ ವಿಷಯವನ್ನು ಬರೆದು ತಿಳಿಸುತಿದ್ದಳು. ಅದರ ಪರಿ ಣಾಮವೇನೇ ಆಗಲಿ, ಆ ಕ್ಷಣಕ್ಕಾದರೂ ಹೃದಯದ ಭಾರ ಸ್ವಲ್ಪ ಕಡಿಮೆ ಯಾಗುತಿತ್ತೋ ಏನೋ! ಆದರೆ ಅವಳಿಗಂತಹ ಅದೃಷ್ಟವಿಲ್ಲ. ಉತ್ತಮ

ಅವಳ ಅಸ್ತಿತ್ವದ ಕಡೆಗೆ ಕಣ್ಮುಚ್ಚಿ ಮುನಿಯಂತೆ ಮೌನ ಧರಿಸಿರುವನು ಅವಳು ಅವನ ಇದಿರಿನಲ್ಲಿ ಮತ್ತೆ ನಿಂತಾಗ ಅವನು ಕಣ್ಣುಗಳನ್ನು ತೆರೆಯಲೂ ಸಾಕು. ಆದರೆ ಅದು ಹರನ ಹಣೆಗಣ್ಣಾಗುವುದೋ ಅಥವಾ ಕೃಪಾದೃಷ್ಟಿ ಪರಿಪೂರ್ಣವಾಗುವುದೋ ಯಾರು ಬಲ್ಲರು? ಅದನ್ನು ಕಾಲವೇ ನಿರ್ಣಯಿಸಬೇಕು. ಈಗಂತೂ ಅವನಿಗೆ ಸಿಟ್ಟು ಬಂದಿರಬೇಕು. ಮತ್ತು ಅದು ಪ್ರಣಯ ಭಂಗದ ಹತಾಶ ಮನುಷ್ಯನ ಸಹಜ ಪ್ರತಿಕ್ರಿಯೆ ಎಂದು ರೋಹಿಣಿ ಅಂದುಕೊಳ್ಳುವಳು.

ಮನುಷ್ಯ ಸ್ತ್ರೀ ವ್ಯಾಮೋಹಿ. ಅವನ ಎಲ್ಲ ಪ್ರಚೋದನೆಗಳಲ್ಲಿ ಕಾಮ ಮತ್ತು ಪ್ರೇಮ ಅತಿ ಬಲವಾದುದು. ಅರಿ ಷಡ್ವೈರಿಗಳಲ್ಲಿ ಐದು ವಶವಾದರೂ ಕಾಮದ ಕಣ್ಣಿಗೆ ಮತ್ತೆ ಉರಿದು ಬೀಳುವರು. ಮನುಷ್ಯ ಸ್ತ್ರೀಗಾಗಿ ಅನ್ನ ಆಹಾರಗಳನ್ನು ತೊರೆಯಬಲ್ಲ. ಸಿರಿ ಸಂಪತ್ತುಗಳನ್ನು ಅವಳ ಕಾಲಡಿ ಚೆಲ್ಲುತ್ತಾನೆ. ರಾಜ್ಯ ಸಾಮ್ರಾಜ್ಯಗಳನ್ನು ಮಣ್ಣು ಮುಕ್ಕಿಸಿದುದು ಒಂದೆರಡು ಸಲವಲ್ಲ. ಸ್ತ್ರೀ ಮನುಷ್ಯನ ಕಾಮಿತ ವಸ್ತು. ಅವನ ಭೋಗ್ಯವಸ್ತು. ಅವನ ಭೋಗಕ್ಕೆ ಮಾಯೆಯೇ ಹೆಣ್ಣಿನ ರೂಪ ತಾಳಿ ಬಂದು ಅವನ ಕಣ್ಣಿಗೆ ಮೋಹದ ಕಾಡಿಗೆ ಹಚ್ಚಿರುವಳು. ಅದು ಅಂಜನ. ಅದರಲ್ಲಿ ಸ್ತ್ರೀ ರೂಪ ವಿಶ್ವರೂಪವಾಗಿ ಕಾಣುತ್ತದೆ. ಅವಳ ಲಾವಣ್ಯ, ಚೆಂದುಟಿ, ಕೋಮಲಾಂಗಗಳೇ ತೋರುತ್ತವೆ. ಅದೇ ಸತ್ಯ; ಉಳಿದದ್ದೆಲ್ಲವೂ ಮಿಥ್ಯೆ ಎಂಬ ಮರುಳು ಅವನಿಗೆ. ಈ ಮಾಯಾಜಾಲದಲ್ಲಿ ನೊಣಗಳಂತೆ ಸಿಲುಕಿದವರೇ ಬಹಳ. ಯುಗಯುಗಾಂತರಗಳಿಂದಲೂ ಹೀಗೆಯೇ. ಮಾನವನ ಮೂಲ ಇಚ್ಛಾತಿರೇಕಗಳಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಅದಕ್ಕೆ ರಾಜರ್ಷಿಯೂ ಒಂದೇ. ರಾಜನೂ ಒಂದೇ. ಪುರುಷೋತ್ತಮನೂ ಒಂದೇ ಎಂದು ರೋಹಿಣಿ ಯೋಚಿಸುತ್ತಾಳೆ.

ರೋಹಿಣಿ ಅವನ ಹೆಂಡತಿ. ಪರ ಸ್ತ್ರೀಯೂ ಇಲ್ಲ. ಉತ್ತಮ ಅವಳ ಪತಿ. ಅವನೇ ಅವಳ ಪ್ರಾಣ. ಅವಳ ಜೀವನದ ಭವಿಷ್ಯವೆಲ್ಲ ಅವನು ಕಟ್ಟಿದ ಮಾಂಗಲ್ಯದಲ್ಲಡಗಿದೆ. ಅದನ್ನು ಕಳೆದುಕೊಂಡ ಸ್ತ್ರೀ ನಮ್ಮ ಸಮಾಜದಲ್ಲಿ ಕೀಟಸಮಾನ. ಅವಳಿಗೆ ಯಾವ ಮಾನ ಮರ್ಯಾದೆಯೂ ದೊರೆಯಲಾರದು. ಶುಭ ಸಭೆ ಮೆರವಣಿಗೆಗಳಲ್ಲಿ ಅವಳು ಕಾಲಿಡಲಾರಳು

ಮುಂಜಾನೆದ್ದು ಮುಖ ನೋಡಿದರೆ ಅನಿಷ್ಟ. ಅಂತಹ ಸ್ತ್ರೀ ಜೀವದಲ್ಲಿದ್ದರೂ ಮರಣ ಹೊಂದಿದಂತೆ. ಸ್ತ್ರೀ ಜೀವನದ ಮೇಲೆ ಪತಿ ಅಷ್ಟು ಪರಿಣಾಮ ಕಾರಿ. ಅವನಿಗೇ ಮಹತ್ವ. ಅವನದೇ ಪ್ರಾಬಲ್ಯ. ಪತಿಯೇ ಪರದೈವ. ಈ ದೇವರಿಗೆ ಸತಿಯ ಸಾಷ್ಟಾಂಗ ನಮಸ್ಕಾರಗಳು; ಸರ್ವಾರ್ಪಣಮಸ್ತು! ಅಲ್ಲಿಗೆ ಸತಿಯು ಅಸ್ತವಾಗುತ್ತದೆ. ಅದು ಸತೀ ಸದ್ಗತಿ ಗೀತೆಯಿಗುಟ್ಟು ಶಾಸ್ತ್ರ, ಶೃತಿ, ಸ್ಮೃತಿ, ಪುರಾಣಗಳು ಹಾಗೆ ಸಾರುತ್ತವೆ. ಸಮಾಜದ ಕಟ್ಟು ನಿಟ್ಟುಗಳು ಹಾಗಿವೆ. ಸಂಪ್ರದಾಯ, ಸದಾಚಾರಗಳ ಏಳೀಳು ಗೆರೆಗಳನ್ನೂ ಎಳೆದಿರುವರು. ಅವನಿಗೆ ಅನುಕೂಲೆ, ಇಚ್ಛಾನುವರ್ತಿ ಯಾಗಿರುವದು ಅವಳ ಧರ್ಮ! ಅದಕ್ಕೆ ವ್ಯತಿರಿಕ್ತವಾಗಿ ನಡೆದರೆ, ನಿರಾ ಕರಿಸಿದರೆ, ತಿರಸ್ಕರಿಸಿದರೆ ಸ್ತ್ರೀಗೆ ರೌರವ ನರಕ!

ರೌರವ ನರಕವಿರಲಿ, ಕೌರವ ನರಕವಿರಲಿ ಎಲ್ಲ ಮರಣ ಹೊಂದಿದ ಮೇಲೆ. ಮತ್ತೆ ಏನಾಗುತ್ತದೋ ? ಯಾರಿಗೆ ಗೊತ್ತಿದೆ ? ನಾಕವೇ ಇರ ಬಹುದು. ನರಕವೇ ಇರಬಹುದು. ನಾಕನರಕಗಳಲ್ಲಿ ಇದ್ದು ಬಂದ ಹಿಂದಣ ಜನ್ಮದ ಸ್ಮರಣೆ ಈ ಜನ್ಮದಲ್ಲಿಲ್ಲ. ಮುಂದಣ ಜನ್ಮದ ಜ್ಞಾನ ಇಂದಿಲ್ಲ. ಕಣ್ಮುಂದೆಯೇ ಮರಣ ಹೊಂದಿದವರು ಎಲ್ಲಿಹೋದರು ? ಏನಾ ದರು ? ಅವರ ಗತಿಯೇನು ? ಜೀವಂತ ಇದ್ದವರಿಗೆ ಅವೆಲ್ಲ ಗೊತ್ತಾಗುವು ದಿಲ್ಲ. ಈ ಲೋಕದ ಕಟ್ಟು ಕಟ್ಟಳೆಗಳು ಆ ಲೋಕದ ಧರ್ಮ ಅಧರ್ಮಗಳಾಗ ಲಿಕ್ಕೂ ಇಲ್ಲ. ಇಲ್ಲಿ ಸರಿಯಿದ್ದವರು ಅಲ್ಲಿ ಸರಾಸರಿ ಇರಲಿಕ್ಕಿಲ್ಲ. ಇಲ್ಲಿ ಸರಿ ಹೋಗದವರು ಅಲ್ಲಿ ಸರಿಹೋಗಲೂ ಬಹುದು. ಅವುಗಳ ಬಗ್ಗೆ ವಿಚಾರ ಮಾಡಿ ತಲೆಕೆಡಿಸಿಕೊಳ್ಳಲು ರೋಹಿಣಿಗೆ ಇಷ್ಟವಿಲ್ಲ. ಅಷ್ಟು ಆಧ್ಯಾತ್ಮಿಕ ಅಧ್ಯಯನ ಜ್ಞಾನವೂ ಅವಳಲ್ಲಿಲ್ಲ.

ಅವಳು ಲೌಕಿಕ ಜೀವಿ. ಇಂದು ನಾಳೆಯ ಸಾಂಸಾರಿಕ ಸ್ಥಿತಿಗತಿಗ ಳನ್ನೇ ಅವಳು ವಿಚಾರಿಸುತಿದ್ದಾಳೆ. ಉತ್ತಮ ಸಹಿಸಿಕೊಂಡಷ್ಟು ದಿನ ಅವಳು ಅವನ ಹೆಂಡತಿ. ಅವನ ಹೃದಯದಲ್ಲಿ ದಯೆ ಇದ್ದಷ್ಟು ದಿನ ಅವಳಿಗೆ ಈ ಮನೆಯಲ್ಲಿ ಆಶ್ರಯ. ಅದು ತಪ್ಪಿದ ದಿನ ಅವಳ ಗತಿ ಯೇನಾಗುತ್ತದೋ ಅನಿಶ್ಚಯ. ಆ ವಿಷ ಗಳಿಗೆ ಯಾವಾಗ ಬರುತ್ತದೋ ಯಾರು ಬಲ್ಲರು ? ಉತ್ತಮ ಎಷ್ಟು ದಿನಗಳ ವರೆಗೆ ಸಹಿಸಿ ಕೊಂಡಾನು?

ಯೌವನಕ್ಕೆ ಎಷ್ಟು ಕಾಲದ ವರೆಗೆ ಸಹನೆಯಿದ್ದೀತು? ಪತಿ ಜೀವದೊಡನೆ ಸಮರಸವಾಗಲು ಹೆಂಡತಿ ತಪ್ಪಿದ್ದಾಳೆ. ಎರಡು ಜೀವಗಳ ಮಧುರ ಮಿಲನ ಸುಖಕ್ಕೆ ಒಲ್ಲದ ಹೆಂಡತಿ ಹೆಂಡತಿಯೇ? ಹೆಂಡತಿ ಎಂದು ನಡೆಸಿ ಕೊಂಡು ಬರುವುದೂ ಸುಲಭವಲ್ಲ. ಒಂದಲ್ಲ ಒಂದು ದಿನ ತನ್ನಿಂದ ತಾನೇ ಗುಟ್ಟು ರಟ್ಟಾಗ ಬಹುದು. ಅವನು ಸ್ವೈರಣೆಗೆಡ ಬಹುದು. ಯೌವನ ದಂಗೆ ಏಳ ಬಹುದು. ಇಂದು ಮುಚ್ಚಿದ್ದ ಅವನ ತುಟಿಗಳು ತೆರೆದು ಹೃದಯವನ್ನೇ ಬಿಚ್ಚಿ ತೋರಿಸುವ ಸಂಭವವೂ ಇದೆ. ಅದನ್ನು ಕಂಡ ತಾಯಿ ತಂದೆ ಹುಚ್ಚಾಗಲಾರರೇ? "ಹುಚ್ಚಿ! ತಾಟಕಿ!" ಎಂದು ಶಪಿಸಲಾರರೇ? ಅವರಿಗೆ ಅನೇಕ ಮಕ್ಕಳೂ ಇಲ್ಲ. ಇರುವವನೂ ಒಬ್ಬನೇ. ಹೆಣ್ಣು ಸಂತಾನ ಲೆಕ್ಕಕ್ಕೆ ಸೊನ್ನೆ. ಒಂದು ವಂಶದ ಬಳ್ಳಿಗೆ ಒಂದೇ ಕುಡಿ ಎಂದು ಜನರ ಭಾವನೆ. ಅದು ಇಂದು ಟಿಸಲು ಹೊಡೆದೀತು, ಹಬ್ಬೀತು ಎಂದು ಅವರ ಅಂತರ್ಯದ ಆಶೆಯೂ ಆಗಿದೆ. ಆದರೆ ಆ ಮೂಲ ಕುಡಿಯನ್ನೇ ಚಿವುಟಿದ ರೋಹಿಣಿಯ ಮೇಲೆ ಕಾಲಾಗ್ನಿರುದ್ರನ ಕೋಪ ತಾಳುವುದು ಸಹಜವೇ. ಮಗನ ಮಹಾಸತಿಯಾಗುವುದರ ಬದಲು ಮಹಾ ಮಾರಿ ಮನೆಗೆ ಪ್ರವೇಶಿಸಿತೆಂದು ತಿಳಿದುಕೊಳ್ಳುವರು. ಹೆಮ್ಮಾರಿಯನ್ನು ಯಾರು ಮನೆಯಲ್ಲಿ ಟ್ಟುಕೊಳ್ಳುತ್ತಾರೆ? ಆದಷ್ಟು ಬೇಗನೇ ಹೊರಗೆ ನೂಕಲು ಎಲ್ಲರ ಪ್ರಯತ್ನ ಎಲ್ಲರೂ ನೂಕುವವರೇ. ಒಳಗೆ ಪ್ರವೇಶಿಸಲು ಬಾಗಿಲೊಂದೂ ತೆರೆಯುವುದಿಲ್ಲ. "ಪಿಶಾಚಿ! ನಡೆ ಹೊರಗೆ" ಎಂದು ಎಲ್ಲರೂ ಅನ್ನುವವರೇ.

ಪಿಶಾಚಿಗಳಿಗಾದರೂ ಒಂದಿಲ್ಲದಿದ್ದರೆ ಇನ್ನೊಂದು ಆಶ್ರಯವಿದೆಯೆಂದು ಹೇಳುತ್ತಾರೆ. ಗಾಳಿಯಲ್ಲಿ ಅವು ಲೀನವಾಗಿ ತೇಲುತ್ತವೆಯಂತೆ! ಬಯಸಿದಾಗ ಬೇವಿನ ಮರ, ಅಶ್ವತ್ಥದ ಮರಗಳನ್ನು ಸೇರುತ್ತವೆ. ಜನರ ಶರೀರದೊಳಗೆ ಅವ್ಯಕ್ತವಾಗಿ ಪ್ರವೇಶಿಸುತ್ತವೆಯೆಂದು ನುಡಿಯುವವರುಂಟು. ಅಂಥ ಕಥೆಗಳೂ ಇವೆ. ಏನಿಲ್ಲದಿದ್ದರೆ ಊರಿನ ಸ್ಮಶಾನವಾದರೂ ಇವೆ; ಅವೇ ಪಿಶಾಚಿಗಳ ವಾಸಸ್ಥಾನ ಎಂಬ ನಂಬಿಗೆ ಎಲ್ಲರದ್ದು. ಪತಿಯಿಂದ ಪರಿತ್ಯಕ್ತೆಯಾದ ಸ್ತ್ರೀಗೆ ಸ್ಮಶಾನದಲ್ಲಿ ಕೊನೆಗೆ ಸ್ವಲ್ಪಸ್ಥಳ ದೊರೆಯಬಹುದೇನೋ ನಿಜ. ಆದರೆ, ಅದು ಸತ್ತಾಗ ಮಾತ್ರ. ಜೀವಂತ ಇರುವಾಗ ಅಲ್ಲಿಯೂ ಇಲ್ಲ. ಅವಳಿಗೆ ನೆರಳಿಲ್ಲ. ನೆಲೆಯಿಲ್ಲ. ಬೆಲೆಯಿಲ್ಲ.

ಬಲವಿಲ್ಲ. ಬೆಂಬಲವಿಲ್ಲ. ಯಾರ ಹೃದಯಗಳಲ್ಲಿ ಮಗಳು, ಹೆಂಡತಿ, ಸೊಸೆ, ಗೆಳತಿ, ಸ್ತ್ರೀ, ಮಾನವೀ ಜೀವಗಳೆಂಬ ನಾನಾರೀತಿಯ ವಾತ್ಸಲ್ಯ, ಪ್ರೇಮ, ಸ್ನೇಹ, ಗೌರವ, ಸಹಾನುಭೂತಿ, ಮೊದಲಾದ ಒಲವಿನ ಸೆಲೆಗಳು ಹರಿಯುತಿದ್ದುವೋ ಅವೆಲ್ಲ ಬತ್ತಿಹೋಗುತ್ತವೆ. ಅವರೆದೆ ಬೇಸಿಗೆಯ ನೆಲವಾಗಿ ಪರಿಣಮಿಸುತ್ತದೆ. ಆ ಒಣಗಿದ ನೆಲದಲ್ಲಿ ಕಾಲಿಡುವುದೇ ಕಷ್ಟ. ಕಾಲಿಟ್ಟರೆ ಕೆಂಡದಂತೆ ಸುಡಬಹುದು. ಕಾಲುಗಳಲ್ಲಿ ಬೊಕ್ಕೆಗಳೇಳುತ್ತವೆ. ಜೀವನದ ದಾರಿಯಲ್ಲಿ ನಡೆಯಲಾಗದೆ ಮೂಲೆಪಾಲಾಗಬೇಕು. ಬೀದಿಪಾಲಾಗಬೇಕು. ಬೊಕ್ಕೆಗಳಲ್ಲಿ ತುಂಬಿದ ಕೀವಿಗೆ ನೊಣಗಳೂ ಮುತ್ತುತ್ತವೆ. ಬೀದಿಯ ನಾಯಿಗಳೂ ಮೂಸಿ ನೋಡುತ್ತವೆ. ಜನರು ಕೇಕೆ ಹಾಕುವರು.

"ರೋಹಿಣೀ, ಓ ರೋಹಿಣೀ, ಆಗ ನೀನು ಏನು ಮಾಡುತ್ತಿ?"

ನಿಲುವುಗನ್ನಡಿಯಮುಂದೆ ನಿಂತು ರೋಹಿಣಿ ಪದೇ ಪದೇ ಈ ಪ್ರಶ್ನೆಯನ್ನು ಕೇಳುತ್ತಾಳೆ.

## ಆರನೆಯ ಅಧ್ಯಾಯ

ನಾರಾಯಣ ರಾಯರು ಪುಣ್ಯಪುರುಷರೇ ಸರಿ. ಹಣ್ಣಾದ ಅವರ ತಲೆಯಮೇಲೆ ಯಾವ ಹೊರೆಯೂ ಇಲ್ಲ. ಮನಸ್ಸು ಸಂತೋಷದಿಂದ ಪ್ರಫುಲ್ಲಿತವಾಗಿದೆ. ಈ ಇಳಿವಯಸ್ಸಿನಲ್ಲಿ ಮಕ್ಕಳಚಿಂತೆಗೊಂದೂ ಕಾರಣವಿಲ್ಲ. ಮಕ್ಕಳಿಲ್ಲವೆಂಬ ಚಿಂತೆ ತಪ್ಪಿದೆ. ಹುಟ್ಟಿದ ಕೆಲವು ಮಕ್ಕಳು ಬಿಟ್ಟು ಹೋದ ಶೋಕಾಗ್ನಿಯೂ ಸ್ವಲ್ಪ ನಂದಿ ಹೋಗಿದೆ. ಅಳಿಯುಳಿದ ಇಬ್ಬರು ಮಕ್ಕಳೂ ಅವರ ಕೈಗೆ ಬಂದರು. ಧಾರಾಳ ಮನಸ್ಸಿನಿಂದ ಇಬ್ಬರನ್ನೂ ಬೆಳೆಸಿದ್ದರು. ಇಬ್ಬರೂ ದೊಡ್ಡವರಾಗಿದ್ದಾರೆ. ಇಬ್ಬರ ರೆಕ್ಕೆಗಳೂ ಬಲಿತಿವೆ. ಲೋಕಪದ್ಧತಿಯಂತೆ ಆಗಬೇಕಾದ ಮುಂಜಿ ಮದುವೆ ಶುಭಶೋಭನಗಳನ್ನೆಲ್ಲ ಅವರು ಸಡಗರದಿಂದಲೇ ನೆರವೇರಿಸಿದ್ದಾರೆ. ಬಣ್ಣದ ಗರಿಗೆದರಿ ಹಾರುವ ಅರಗಿಳಿಯಂತೆ ನಾಗವೇಣಿ ಜರತಾರಿ ಸೀರೆಯ ಸೆರಗನ್ನು ಹಾರಿ

ಸುತ್ತ ವರನ ಮನೆಗೆ ಹಾರಿಹೋದಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ.

ನಾಗವೇಣಿ ಸಲ್ಲಕ್ಷಣೆ. ಅವಳ ಅದೃಷ್ಟವೂ ಒಳ್ಳೆಯದು. ಅವಳು ಹೊಕ್ಕಮನೆ ನಂದಗೋಕುಲ. ಹಾವೇರಿಯ ದೊಡ್ಡ ದೇಸಾಯಿ ಕುಟುಂಬಕ್ಕೆ ಸೇರಿದ್ದಾಳೆ. ವಟವೃಕ್ಷದಂತೆ ಆ ಮನೆತನದ ಬೇರುಗಳೂ ಶಾಖೆಗಳೂ ಅನೇಕ ಕಡೆಗಳಿಗೆ ಹಬ್ಬಕೊಂಡಿವೆ. ಅದರ ರೆಂಬೆಯಿಂದ ಒಡೆದು ಇಳಿದ ಒಂದೊಂದು ಬೇರು ಒಂದೊಂದು ಪ್ರತ್ಯೇಕ ಹೆಮ್ಮರವಾಗಿ ಕಂಗೊಳಿಸುತ್ತದೆ. ಅಂತಹ ಒಂದು ಎಳೆ ವೃಕ್ಷಕ್ಕೆ ನಾಗವೇಣಿ ಸುತ್ತಿಕೊಂಡಿದ್ದಾಳೆ. ಅವಳ ರೂಪಕ್ಕೆ ತಕ್ಕಭೂಪ. ಸ್ವಲ್ಪ ವಿದ್ಯಾವಂತನೂ ಹೌದು. ಉಚ್ಚಶಿಕ್ಷಣಕ್ಕೆ ಅವನು ತೆರಳಲಿಲ್ಲ. ತೆರಳುವ ಅವಶ್ಯಕತೆನೂ ಇರಲಿಲ್ಲ. ಆಳುಕಾಳು ಹೊಲಮನೆಗಳ ವ್ಯವಸ್ಥೆಗಳಕಡೆಗೆ ಹೆಚ್ಚು ಗಮನ ಕೊಟ್ಟಿದ್ದ. ಇದ್ದುದನ್ನು ಹಾಳುಮಾಡದೆ ಇದ್ದುದರಲ್ಲೇ ತೃಪ್ತಿಪಡೆದುಕೊಂಡು ಇದ್ದಾನೆ. ಮಕ್ಕಳನ್ನೂ ಕೊಟ್ಟ ದೇವರು. ಚೊಚ್ಚಲಗಂಡು ಅವನ ಬಲತೋಳಿನಲ್ಲಿ ತೂಗುತ್ತಿದೆ. ಒಂದು ವರುಷದ ಸರೋಜಳನ್ನು ನಾಗವೇಣಿ ಇನ್ನೂ ತೊಟ್ಟಿಲಿನಲ್ಲಿಟ್ಟು ತೂಗುತಿದ್ದಾಳೆ. ಅವಳದು ತುಂಬು ಜೀವನವಾಗಿದೆ. ಅವಳನ್ನು ಸ್ಮರಿಸಿಕೊಂಡಾಗಲೆಲ್ಲ ನಾರಾಯಣರಾಯರ ಎದೆ ಆನಂದದಿಂದ ತುಂಬುತ್ತದೆ.

ಮಗಳಮೇಲೆ ಮಗನಿಗಿಂತಲೂ ಅವರಿಗೆ ಅಧಿಕಪ್ರೇಮ. ಉತ್ತಮನಿಗಿಂತ ಮೊದಲು ಅವಳು ಬಂದುದೊಂದೇ ಕಾರಣವಲ್ಲ. ಮಗನಾನಂತರ ಅವಳು ಹುಟ್ಟಿದ್ದರೂ ಆ ಮಮತೆ ಕಡಿಮೆಯಾಗುತಿದ್ದಿಲ್ಲ. ಒಬ್ಬಳೇ ಮಗಳಲ್ಲವೇ ? ಮೊದಲು ಆ ಕುಡಿ ಕೊನರಿದರೂ ಅಷ್ಟೆ. ಮತ್ತೆ ಹುಟ್ಟಿ ಬಂದರೂ ಅಷ್ಟೆ. ಅಲ್ಲದೆ, ಅನೇಕ ಗಂಡಸರಿಗೆ ತಮ್ಮ ಹೆಣ್ಮಕ್ಕಳಮೇಲೆ ಹೆಚ್ಚು ಸಹಾನುಭೂತಿ ಇರುತ್ತದೆ. ನಾರಾಯಣರಾಯರು ಅಂತಹ ಮನುಷ್ಯ. ಅವರ ಪ್ರೀತಿ ಕೇವಲ ಒಣಬಣ ಠಣಠಣ ಮಾತಿನ ಉಪಚಾರವೂ ಅಲ್ಲ.

ನಾಗವೇಣಿ ಸಣ್ಣವಳಿದ್ದಾಗ ಅವಳು ಕೇಳಿದುದಕ್ಕೆ ಇಲ್ಲವೆಂದವರಲ್ಲ. ತಮಗೆ ಇಷ್ಟದೋರಿದುದನ್ನೂ ಕೊಟ್ಟಿದ್ದರು. ಅವಳನ್ನು ಕೊಡುವ ಕಾಲಕ್ಕೆ ತಮ್ಮ ಇಷ್ಟಾನುಸಾರವಾಗಿ ವರ್ತಿಸಿದರು. ಸೀರೆ, ಕುಬಸ,

ಬೆಳ್ಳಿಪಾತ್ರೆ, ಲೋಟ, ಅವರು ಕೊಟ್ಟುದುದಕ್ಕೆ ಲೆಕ್ಕವಿಲ್ಲ. ಅವಳು ಗರ್ಭಿಣಿಯಾದಾಗ ಅನೇಕ ಉಡುಗೊರೆಗಳನ್ನಿತ್ತರು. ಚೊಚ್ಚಲ ಮಗು ಹರ್ಷ ಮತ್ತು ಅವನ ತಾಯಿಯನ್ನು ಕಳಿಸಿದಾಗ ಇಬ್ಬರಿಗೂ ವಸ್ತ್ರಾಭರಣ ಗಳನ್ನು ತೊಡಿಸಿದರು. ಸರೋಜ ಅರಳಿದಾಗ ಅದರ ಕಾಲುಗಳಿಗೆ ಗೆಜ್ಜೆ ಕಟ್ಟಿದರು. ನಾಗವೇಣಿ ಮನೆಗೆ ಒಂದು ಹಿಂತೆರಳಿದಾಗಲೆಲ್ಲ ಏನಾದ ರೊಂದನ್ನು ಅವರು ಕೊಡದೇ ಇಲ್ಲ. ಮತ್ತೆ ಅವಳು ಯಾವಾಗಲೂ ಬರುವವಳೇ. ಬರಲು ನಾರಾಯಣರಾಯರು ಯಾವಾಗಲೂ ಪತ್ರ ಬರೆಯುವವರೇ. ಒಮ್ಮೊಮ್ಮೆ ಹಬ್ಬಹುಣ್ಣಿಮೆಯನ್ನು ಕಾಣಿಸುತ್ತಾರೆ. ಮತ್ತೊಮ್ಮೆ ಮುದ್ದು ಮಕ್ಕಳನ್ನು ನೋಡಲು ಅವರಿಗೆ ಬಹಳ ಆಸೆಯಾಗು ತ್ತದೆ. "ಬೇಸರವಾಗಿದೆ ನಿನ್ನಮ್ಮನಿಗೆ. ಒಬ್ಬಳಿಗೇ ಹೊತ್ತು ಹೋಗುವುದಿ ಲ್ಲವಂತೆ" ಎಂದು ಆಗಾಗ ಬರೆಯುವರು. "ಕೆಟ್ಟ ಕೆಟ್ಟ ಕನಸುಗಳು ಬಿದ್ದಿವೆ. ನಿನ್ನ ಮೋರೆ ತೋರಿಸಿ ಹೋಗು" ಎಂದು ಬರೆಯುವುದೂ ಇದೆ. ಅವರಿಗೆ ಸ್ವಲ್ಪ ತಲೆನೋವಾದರೆ, ಮೈ ಬಿಸಿಯಾದರೆ ಸಾಕು. ಹಾವೇರಿಗೆ ಜನ ಕೊಟ್ಟುಕಳಿಸುವುದೂ ಇದೆ. ಧಾರವಾಡಕ್ಕೆ ಒಳ್ಳೇ ಸಿನಿಮ ಬಂತೆಂದು ಗೊತ್ತಾದರೆ ಸರಿ; ಮುಂಜಾನೆ ರೇಲ್ವೆ ಸ್ಟೇಶನ್‌ಕಡೆ ಗಾಳಿ ಸವಾರಿಗೆ ತೆರಳಿ ದವರು ಹಾವೇರಿಯ ಗಾಡಿ ಹತ್ತಿದರೇ. ಹೀಗಾಗಿ ಅವಳು ಬರುವುದೂ ನಿಂತಿಲ್ಲ. ಅವರು ಕೊಟ್ಟುದುದೂ ಮುಗಿದಿಲ್ಲ. ಈಗ, ಇತ್ತೀಚೆಗೆ ಎಂದರೆ ಉತ್ತಮನ ಲಗ್ನವಾದಮೇಲೆ ನಾಗವೇಣಿಯ ಸುಳಿವು ಕಡಿಮೆ. ಮನೆಗೆ ಸೊಸೆ ಬಂದಿದ್ದಾಳಲ್ಲವೇ ?

ರೋಹಿಣಿ ತನ್ನ ಮಗಳಲ್ಲ; ತಂದ ಮಗಳು. ನಿಜ. ಆದರೆ ತಂದ ಈ ಒಡವೆಯನ್ನು ನಾರಾಯಣರಾಯರು ಈಗಾಗಲೇ ಒರೆಗಲ್ಲಿಗೆ ತಿಕ್ಕಿ ನೋಡಿದ್ದಾರೆ. ಅದು ಖೊಟ್ಟಿಯಲ್ಲ. ಗಟ್ಟಿ ಚಿನ್ನ. ದಿವ್ಯಾಭರಣ. ಮುಖ ಕಾಂತಿಯಂತೆ ರೋಹಿಣಿಯ ಗುಣವೂ ಹೊಳೆಯುತ್ತಿದೆ. ಮಾತಿನಲ್ಲೂ ನಡತೆಯಲ್ಲೂ ನಾಗವೇಣಿಗಿಂತ ಒಂದು ತೂಕ ಹೆಚ್ಚು. ನಾಗವೇಣಿ ಎರಡು ಮಕ್ಕಳ ತಾಯಿಯಾದರೂ ತಕತಕ ಕುಣಿಯುತ್ತಾಳೆ. ಯಾವ ಅಂಜಿಕೆಯೂ ಇಲ್ಲ. ಯಾರ ಹಂಗೂ ಇಲ್ಲ. ಗಟ್ಟದ ಝರಿಯಲ್ಲಿ ಭೋರ್ಗರೆದು ಹರಿವ ತೊರೆ. ಅದರ ರಭಸ ಬಹಳ. ಸುತ್ತಲೂ ನೊರೆ ನೀರು ಚೆಲ್ಲುತ್ತದೆ

ಅದರಂತೆ ಎಲ್ಲರೊಡನೆ ಮಾತನಾಡುವಳು. ಎಲ್ಲ ಮಾತುಗಳನ್ನಾಡುವಳು ಎಲ್ಲೆಲ್ಲಿಯೂ ಇರುವಳು. ಮನೆಯಲ್ಲಿ ಅವಳೊಬ್ಬಳಿದ್ದರೆ ಸಾಕು. ಅಷ್ಟು ಅವಳ ಗುಲ್ಲು ಸೊಲ್ಲು. ಆದರೆ ರೋಹಿಣಿ ಅವರ ಸೊಸೆ ಸಣ್ಣವಳಾದರೂ ಅದಿಕ ಗುಣವಂತೆ. ತುಂಬಿದ ನದಿ ಬಯಲಿನಲ್ಲಿ ಹರಿದಂತೆ ಶಾಂತ. ತುಂಬಿದ ಸಭೆಯಲ್ಲೂ ಅವಳ ರೂಪ ಗುರುತಿಸಿ ಅವಳಿದ್ದಾಳೆ ಎಂದು ಕಂಡುಕೊಳ್ಳಬೇಕಲ್ಲದೆ ಮಾತಿನಿಂದಲ್ಲ. ಅತಿ ಮಾತೇ ಇಲ್ಲ. ಮಾತೂ ಶ್ರುತಿಯಂತೆ. ಮಂಜುಳ. ಕಳಕಳಕಳಾರವವನ್ನೆಬ್ಬಿಸಿದುದನ್ನು ಅವರು ಒಮ್ಮೆಯೂ ಕೇಳಿಲ್ಲ. ಈ ಕೋಣೆಯಲ್ಲಿ ಅವಳು ಮಾತನಾಡಿದರೆ ಆಚೆ ಕೋಣೆಗೆ ಮುಟ್ಟದು. ಇಷ್ಟು ಹತ್ತಿರ ತವರು ಮನೆಯಿದ್ದರೂ ಅವಳು ತೆರಳಲು ಬಯಸಿದುದು ವಿರಳ. ಅವಳ ರೀತಿ ನಡಾವಳಿಗಳನ್ನು ನೆನಸಿಕೊಂಡಷ್ಟು ನಾರಾಯಣರಾಯರಿಗೆ ತೃಪ್ತಿಯಿಲ್ಲ. ಮುಂಜಾನೆ ಮತ್ತು ಸಂಜೆ ಗಾಳಿ ಸವಾರಿಗೆ ತೆರಳಿದಾಗಲೆಲ್ಲ ಅವರು ಅದನ್ನು ಸ್ಮರಿಸಿಕೊಳ್ಳುವುದೂ ರೂಢಿ.

ಅವರ ಗಾಳಿ ಸವಾರಿಯಲ್ಲೂ ಒಂದು ಪದ್ಧತಿಯಿದೆ. ಮುಂಜಾನೆ ಅವರು ಹುಬ್ಬಳ್ಳಿ ರಸ್ತೆ ಹಿಡಿದು ತೆರಳುವರು. ಸುಂಕದ ಕಟ್ಟೆ ದಾಟಿ ಯಾರೂ ಇಲ್ಲದ ದೊಡ್ಡ ದಿನ್ನೆಯನ್ನೇರುವರು. ಬೆಳಕು ಹರಿದಾಗ ಒಮ್ಮೊಮ್ಮೆ ಅವರು ದಿನ್ನೆಯ ಮೇಲೆ ಕುಳಿತುಕೊಳ್ಳುವುದೂ ಇದೆ. ಟೊಪ್ಪಿ,ಉಣ್ಣೆಯ ಕೋಟು, ಮಫ್ಲರ್, ಬೆತ್ತಗಳನ್ನು ತೆಗೆದಿಟ್ಟು ಸೂರ್ಯನ ಇದಿರಾಗಿ ನಿಲ್ಲುವರು. ಆ ಮೇಲೆ ಕೈಗಳೆರಡನ್ನೂ ಮೇಲೆ ಕೆಳಗೆ, ಆಚೆ ಈಚೆ ಚಾಚುವರು. ಎಂಟು ಹತ್ತು ಸಲ " ಉಟೋ, ಬೈಟೋ '' ಬಸ್ಕಿ ತೆಗೆಯುವುದೂ ಇದೆ. ಮತ್ತೆ ಕಣ್ಮುಚ್ಚಿ ಶ್ವಾಸ ಎಳೆಯುವ ಬಿಡುವ ಪ್ರಾಣಾಯಾಮವೂ ಆರಂಭವಾಗುತ್ತದೆ. ಪುನಃ ವೇಷ ಭೂಷಣ ಧರಿಸಿ ಹೊರಡುವ ಮೊದಲು ದಿನ್ನೆಯ ಮೇಲೆ ನೆಪೋಲಿಯನ್ನನಂತೆ ನಿಂತು ಸಿಂಹಗಾಂಭೀರ್ಯದಿಂದ ನಗರ ಹಾಗೂ ಅದರ ಸುತ್ತುಮುತ್ತಲಿನ ಕೊಳ್ಳ ದಿನ್ನೆಗಳನ್ನು ವಿಹಂಗಮ ದೃಷ್ಟಿಯಿಂದ ನೋಡುವರು. " ಧಾರವಾಡ ಬೆಳೆಯುತ್ತಿದೆ. ಬೆಳೆಯುತ್ತಿದೆ. ಇನ್ನೂ ಬೆಳೆಯುತ್ತಿದೆ '' ಎಂದು ಅಂದು ಕೊಂಡು ಮನೆಯದಾರಿ ಹಿಡಿಯುವರು.

ಸಾಯಂಕಾಲ ನಾರಾಯಣರಾಯರ ಸವಾರಿ ಪೇಟೆಗೆ ತೆರಳುತ್ತದೆ. ಕೈಯಲ್ಲಿ ಒಂದು ಚೀಲವನ್ನು ಹಿಡಿದುಕೊಳ್ಳಲು ಅವರು ಮರೆಯುವದಿಲ್ಲ. ಮನೆಯಿಂದ ಹೊರಡುವಾಗ "ಗಂಟೆ ಐದಾಯಿತು" ಎಂದು ಅವಸರ ಮಾಡುವರು. ಆದರೆ ಅವರಂತೆ ಇಂತಿಷ್ಟೇ ಗಂಟೆಗೆ ಮರಳುವರೆಂಬ ನಿಯಮವಿಲ್ಲ. ಮನೆಬಿಟ್ಟ ಮೇಲೆ ಗಂಟೆ ಪ್ರಕಾರ ಅವರ ಕಾರ್ಯಕ್ರಮಗಳೂ ಇರುವುದಿಲ್ಲ. ಹೊರಟಾಗ ಒಬ್ಬರೇ. ಆದರೆ ದಾರಿಯುದ್ದಕ್ಕೂ ಅಲ್ಲಲ್ಲಿ ನಿಂತು, ಅಲ್ಲಲ್ಲಿ ಓಣಿಗಳಿಗೆ ಪ್ರವೇಶಿಸಿ, "ಏ ದೇಸಾಯಿ ಬಾರೋ. ಏ ಜೋಶಿ ಹೊರಡೋ" ಎಂದು ಕೂಗುವುದು ಅವರ ದಿನನಿತ್ಯದ ಪದ್ಧತಿ. ದೊಡ್ಡವರು. ದೊಡ್ಡ ಮಾಮಲೇದಾರ ಕೆಲಸ ಮಾಡಿದವರು. ಆದುದರಿಂದ ದೇಸಾಯಿಯಾಗಲೀ ದೇಶಪಾಂಡೆಯಾಗಲೀ ಒಂದೊಂದು ಊರುಗೋಲು ಹಿಡಿದು ಕೊಂಡು ಬಂದರೇ. ಕೆಲವರು ಅಲ್ಲಲ್ಲಿ ನಿರೀಕ್ಷಿಸುತ್ತ ನಿಂತಿರುತ್ತಾರೆ. ಮತ್ತು ಗುಂಪು ಬಂದಾಗ ಅದರಲ್ಲಿ ನುಸುಳಿಕೊಳ್ಳುವರು ಹೀಗಾಗಿ ನಾರಾಯಣರಾಯರು ಪೇಟೆಗೆ ಬಂದಾಗ ಅವರ ಹಿಂದೆ ಪೆನ್ಶನ್ ದಾರರ ದೊಡ್ಡ ತಂಡವೇ ಕೂಡಿಕೊಳ್ಳುತ್ತದೆ.

ಇಂತಿಷ್ಟೇ ಹೊತ್ತಿಗೆ ಈ ದಂಡು ಇಲ್ಲಿಲ್ಲಿ ಹಾದು ಹೋಗುತ್ತಿರುತ್ತದೆ ಮತ್ತು ಇಲ್ಲಿಲ್ಲಿ ಡೇರೆ ಹೊಡೆದಿರುತ್ತದೆಂದು ಈ ಗೆಳೆಯರ ಬಳಗದ ಸವಸ್ಯರಿಗೆ ಗೊತ್ತು. ಅಲ್ಲಲ್ಲಿ ಗುಂಪು ನಿಂತು, ನಿರೀಕ್ಷಿಸಿ, ಹಾಡಿ ಆಡಿ, ನಕ್ಕು ನಲಿದು, ನಸ್ಯಏರಿಸಿ ಮುದ್ಯಾನೆಗಳ ಹಿಂಡಿನಂತೆ ನಡೆದು ಬರಲು ಸ್ವಲ್ಪ ಹೊತ್ತೂ ಹಿಡಿಯುತ್ತದೆ. ಇದಿರಿಗೆ ಯಾರಾದರೂ ಗುರುತು ಪರಿಚಯದವರು ಬಂದರೆ ಅವರೊಡನೆ ಸುಖದುಃಖದ ಮಾತುಗಳನ್ನು ಆಡುವರು. ಅವನು, ಅವನ ಹೆಂಡತಿ, ಮಕ್ಕಳು, ಅವನ ಆಸ್ತಿಪಾಸ್ತಿ, ಬಂಧು ಬಳಗ, ಊರುಕೇರಿ, ಊರಿನಲ್ಲಿರುವ ಅಧಿಕಾರಿಗಳು, ಅವರ ನಡತೆ, ಮೊದಲಾದವುಗಳನ್ನು ಕೇಳಿ ತಿಳಿದು ಕೊಂಡು ಮುಂದೆ ಹೊರಡುವ ಪದ್ಧತಿ. ಪರಿಚಯವಿಲ್ಲದವರು ಇದಿರಾದಾಗ, "ಹೇ, ಅವನು ಯಾರೋ ಮೂತಿ ನೋಡಿದ ಹಾಗಿದೆ ಎಲ್ಲೋ?" ಎಂದು ಯಾರಾದರೊಬ್ಬರು ಪ್ರಶ್ನಿಸುವರು. ಇನ್ನೊಬ್ಬರು ಅವನ ಕುಲ, ಗೋತ್ರ ಜಾತಕ, ಗಳನ್ನು ಬಿಚ್ಚುವರು. ರಸ್ತೆಯ ಅಂಚಿನಲ್ಲಿರುವ ಮರಗಳ ವರ್ಣನೆಯೂ ಆಗಬೇಕು

ಆ ಮರದಲ್ಲಿ ಯಾವುದಾದರೊಂದು ಹಕ್ಕಿಹಾಡುತ್ತ ಕುಳಿತಿದ್ದರೆ ಅದನ್ನು ಕೇಳುತ್ತ ನೋಡುತ್ತ ಕೆಲವು ನಿಮಿಷಗಳ ವರೆಗೆ ನಿಂತು ಬಿಡುವರು. ಮುನಿಸಿಪಾಲಿಟಿಯ ಮುಂದೆ ಅವರ ನೆರಳು ಹಾದಾಗ ಅದೂ ಅವರ ವಾಗ್ಬಾಣಗಳಿಗೆ ಗುರಿಯಾಗುತ್ತದೆ. "ಇದು ನುಸಿಪಾಲಟಿ; ಮುನಿಸಿಪಾಲಿಟಿಯಲ್ಲ" ಎಂದು ಒಬ್ಬರು ಮಾತೆಗೆದು ಧಾರವಾಡದ ಕೊಳಕು ರಸ್ತೆ ಹುಳುಕು ಆಡಳಿತೆಗಳ, ಸವಿಸ್ತಾರ ವಿವರಗಳನ್ನು ಚಿತ್ರಗುಪ್ತರಂತೆ ಒರೆಯುವರು. ಮುನಿಸಿಪಾಲಿಟಿ ಕಟ್ಟಡದ ಮುಂದೆ ಬೆಳೆಸಿರುವ ಉದ್ಯಾನವನವನ್ನು ಒಬ್ಬರು ಅಶೋಕವನಕ್ಕೂ ಮತ್ತೊಬ್ಬರು ಖಾಂಡವವನಕ್ಕೂ ಹೋಲಿಸುವುದುಂಟು. ವಿದ್ಯಾವರ್ಧಕ ಸಂಘದ ಬಳಿ ನಿಂತಿರುವ ಶಿಲಾಬಾಲಿಕೆಯರೂ ಈ ಮುಪ್ಪಿನ ಮುದುಕರ ಮನಗಳನ್ನು ಮೋಹಿಸುವುದು ಸುಳ್ಳಲ್ಲ. ಆ ಶಿಲಾ ಬಾಲಿಕೆ ನಿಂತ ಬಂಗಿ, ಒನಪು ವೈಯ್ಯಾರ, ಕಿರು ನಗೆಗಳನ್ನು ಒಬ್ಬರು ಮುಗ್ಧರಾಗಿ ಹೊಗಳುವರು."ಇದನ್ನು ಕೆತ್ತಿದವನು ಜಕಣಾಚಾರ್ಯನೋ ಕಲ್ಕುಡನೋ, ಕಲ್ಲುರುಟಿಯೋ ? " ಎಂದು ಒಬ್ಬರು ಪ್ರಶ್ನಿಸುತ್ತಾರೆ. " ಇದು ಹಾಳುಹಂಪೆಯಲ್ಲಿ ಸಿಕ್ಕಿತೇ ಹೇಗೆ ? ಇದನ್ನು ತಂದವರು ಯಾರು ? ಹೇಗೆ ತಂದರು ? ಯಾವಾಗ ತಂದರು ? ಯಾರು ತಂದರು ? ತರಲು ಕಾರಣವೇನು ? " ಎಂಬ ಪ್ರಶ್ನ ಮಾಲಿಕೆಗಳೊಂದಿಗೆ, " ಶಾಸನವೇನಾದರೂ ಇದೆಯೇ? ಇದ್ದರೆ ಅದು ಯಾವ ಭಾಷೆಯಲ್ಲಿ ? ಧಾರವಾಡದ ಪ್ರಸಿದ್ಧಪಂಡಿತ ವಕ್ಕಿಗಳು ಅದನ್ನು ಓದಿರುವವೇ ಹೇಗೆ ? ಬೆಂಗಳೂರು ಮತ್ತು ಮಂಗಳೂರುಗಳ ಪಂಡಿತರು ಉತ್ತರ ಕರ್ನಾಟಕದ ಈ ಕಲಾಕೌಶಲ್ಯವನ್ನು ಹೊಗಳಿರುವರೋ ತೆಗಳಿರುವರೋ ಹೇಗೆ ?" ಮೊದಲಾದ ತರ್ಕಗಳೂ ನಡೆಯುತ್ತವೆ. ತರ್ಕದಿಂದ ಮೀಮಾಂಸೆ ಸಾಹಿತ್ಯ, ವ್ಯಾಕರಣ, ಏಕೀಕರಣ, ಪುರಾಣ, ಅಷ್ಟ ಪುರಾಣ, ಇಷ್ಟ ಪುರಾಣ ಯಾವುದು ಬೇಕು ಯಾವುದು ಬೇಡ ? ಎಲ್ಲವುಗಳ ಪಠನ ಪ್ರವಚನಗಳು ನಡೆಯುತ್ತವೆ. ಮಾರ್ಕೇಟ್ ಮುಟ್ಟಿದಾಗ ನಸುಗತ್ತಲೆ.

ಮಾರ್ಕೇಟಿಗೆ ಬಂದ ಮೇಲೆ ನಾರಾಯಣ ರಾಯರು ಏನಾದರೊಂದನ್ನು ಕೊಂಡುಕೊಳ್ಳುವರು. ಎಲೆ, ಅಡಿಕೆ, ತಂಬಾಕು, ಅವಲಕ್ಕಿ, ಹಣ್ಣು ಕಾಯಿಪಲ್ಲೆ ಇವುಗಳಲ್ಲಿ ಯಾವುದಾದರೊಂದು ಅವರ ದಿನನಿತ್ಯದ

ವ್ಯಾಪಾರವಾಗುತ್ತದೆ. ಅದಕ್ಕೆಂದೇ ಕೈಚೀಲವನ್ನು ಅವರು ತರುವ ಪದ್ಧತಿ. ಸೊಸೆ ಬಂದಮೇಲೆ ಆ ಚೀಲದ ಮೇಲ್ಭಾಗದಲ್ಲಿ ಅಥವಾ ಕೋಟಿನ ಎರಡೂ ದೊಡ್ಡ ಜೇಬುಗಳಲ್ಲಿ ಹೂಗಳನ್ನು ತುಂಬಿಸಿಕೊಳ್ಳುವರು. ಸಾಮಾನು ಬಹಳವಾದ ದಿನ ಟಾಂಗಾ ಏರಿ ಮರಳುವುದೂ ಇದೆ. ಅವರ ಬಳಗ ಕರಗಿ ಅಂಟಿಕೊಂಡಿರದಿದ್ದರೆ ಕೂಲಿಹುಡುಗನನ್ನು ಗೊತ್ತು ಮಾಡುವರು. ಬೇಳೆಕಾಳು ಮೊದಲಾದ ವಸ್ತುಗಳನ್ನು ವಾರಂಪ್ರತಿ ಸಂತೆಯದಿನ ಕೊಂಡು ಆಳುಗಳ ಮೂಲಕ ಅಥವಾ ಟಾಂಗಾದ ಮೇಲೆ ಹೇರಿಕಳಿಸುವರು. ಜೋಳ, ಗೋದಿ, ಅಕ್ಕಿ, ಮೊದಲಾದ ಕಾಳುಕಡಿಗಳನ್ನು ಅವರು ಧಾರವಾಡದ ಮಾರ್ಕೇಟಿನಲ್ಲಿ ಕ್ರಯಕ್ಕೆ ಪಡೆಯುವುದೇ ಇಲ್ಲ. ಅವರ ಸ್ವಂತ ಹೊಲದಲ್ಲಿ ಬೆಳೆದುದು ಅವರ ಮನೆಗೆ ಸಾಕೇಸಾಕು,

ಅವರ ಸ್ವಂತಹೊಲ ರಾಣೆಬೆನ್ನೂರಿನಲ್ಲಿದೆ. ಪಿತ್ರಾರ್ಜಿತ ಆಸ್ತಿ. ನಾರಾಯಣರಾಯರಿಗೂ ಅದರ ಒಂದು ತುಣುಕು ಒಂದಿದೆ. ಅವರಿಗೆ ಕೆಲಸವಿದ್ದುದರಿಂದ ತಮ್ಮ ಹೊಲವನ್ನು ಲಾವಣಿಗೆ ಕೊಟ್ಟಿದ್ದರು. ವರುಷಂಪ್ರತಿ ನಾರಾಯಣರಾಯರು ರಾಣೆಬೆನ್ನೂರಿಗೆ ತೆರಳಿದಾಗ ಅವರ ರೈತ ಗೋದಿ, ಜೋಳ ಅಳೆಯುತ್ತಾನೆ. ಮೊದಲು ಅವರು ಅದನ್ನು ರಾಣೆಬೆನ್ನೂರಿನಲ್ಲೇ ಮಾರಾಟಮಾಡಿ ಹಣಪಡೆದುಕೊಂಡು ಬರುತಿದ್ದರು ಧಾರವಾಡಕ್ಕೆ ಬಂದು ವಾಸಿಸಲಾರಂಭಿಸಿದ ಬಳಿಕ ಮನೆ ಉಪಯೋಗಕ್ಕೆ ಅವಶ್ಯವಿದ್ದ ಕಾಳುಕಡಿಯನ್ನು ಗೂಡ್ಸ್‌ಗಾಡಿಯಲ್ಲಿ ಹೇರಿಕೊಂಡು ಬರತೊಡಗಿದರು. ಹೆಚ್ಚಿನ ಧಾನ್ಯಗಳನ್ನು ಈಗಲೂ ವಿಕ್ರಯಿಸುವರು. ಬೆಲೆ ಏರಿದಾಗ ಅವರ ರೈತ ಹೇಳಿಕಳಿಸುತ್ತಾನೆ. ಇಲ್ಲವೇ ಯಾರ ಕೈಯಿಂದಲಾದರೂ ಪತ್ರಬರೆಸಿ ಹಾಕುತ್ತಾನೆ. ಅದರಂತೆ ಈ ವರುಷವೂ ರೈತನ ಪತ್ರಬಂದುದರಿಂದ ಒಂದು ದಿನ ನಾರಾಯರಾಯರು ರಾಣೆಬೆನ್ನೂರಿಗೆ ಹೊರಟು ಹೋದರು.

ರಾಣೆಬೆನ್ನೂರು ಅವರ ಹುಟ್ಟೂರು. ಬಂಧುಬಳಗದವರಿದ್ದಾರೆ. ಇಷ್ಟಮಿತ್ರರಿಗೂ ಕಡಿಮೆಯಿಲ್ಲ. ಕೆಲವು ಆಫೀಸರರನ್ನೂ ಬಲ್ಲರು. ವಸಂತ ಕಾಲದಂತೆ ನಾರಾಯಣರಾಯರು ವರುಷಕ್ಕೊಮ್ಮೆ ಆಗಮಿಸುವವರು. ಬೇಗನೇ ಹೊರಡಲು ಯಾರೂ ಅವರನ್ನು ಬಿಡುವಂತಿಲ್ಲ. ಸ್ನೇಹ,

ಬಾಂಧವ್ಯ, ದಾಕ್ಷಿಣ್ಯಗಳ ಉರುಲುಗಳನ್ನು ಹರಿದುಕೊಂಡು ಬರಲು ಆವರಿಗೂ ತ್ರಾಣವಿಲ್ಲ. ಸರಕಾರೀ ಕೆಲಸವಿದೆ ಎಂದು ನೆವಹೇಳಿ ತಪ್ಪಿಸಿಕೊಳ್ಳುವ ಕಾಲವೂ ಕಳೆದಿದೆ. ಹೀಗಾಗಿ ರಾಣೆಬೆನ್ನೂರಿನಲ್ಲಿ ಕೆಲವು ದಿನಗಳು ಕಳೆಯುತ್ತವೆ. ಕೆಲವುದಿನ ಅವರು ಹಾವೇರಿಯಲ್ಲೂ ಉಳಿಯಬೇಕಾಗುತ್ತದೆ. ರಾಣೆಬೆನ್ನೂರಿನ ಬೆನ್ನಿನಲ್ಲೇ ಇದೆ ಹಾವೇರಿ. ಅದನ್ನು ದಾಟಿಯೇ ಹೋಗಬೇಕು ರಾಣೆಬೆನ್ನೂರಿಗೆ. ಹೋಗುವಾಗ ಅಲ್ಲಿ ಇಳಿಯಲಿಕ್ಕಾಗದಿದ್ದರೂ ಹಿಂತಿರುಗುವಾಗ ನಾಗವೇಣಿಗೆ ಮೋರೆ ತೋರಿಸದಿದ್ದರೆ ಹೇಗೆ? ಇಳಿದ ಮೇಲೆ ಅವಳು ಒಂದೆರಡು ದಿವಸಗಳಲ್ಲಿ ಕಳಿಸುವವಳೂ ಅಲ್ಲ, ಆದುವರಿಂದ ನಾರಾಯಣರಾಯರು ಧಾರವಾಡಕ್ಕೆ ಹಿಂತಿರುಗಲಿಲ್ಲ.

"ಅಲ್ಲೇ,ಹಾವೇರಿಯಲ್ಲೇ,ನಾರಾಯರು ಕ್ಯಾಂಪ್ ಹೊಡೆದಿರಬೇಕು. ಇಲ್ಲಿಯ ಯೋಚನೆಯಿಲ್ಲ" ವೆಂದು ಕಾಯಿಪಲ್ಲೆಗಳೆಲ್ಲ ಮುಗಿದ ದಿನ ಗಂಗಮ್ಮನವರು ಸೊಸೆಯ ಮುಂದೆ ನುಡಿದರು.

"ಅತ್ತೇ, ನಾನು ಪೇಟೆಗೆ ಹೋಗಿ ತರುತ್ತೇನೆ" ಎಂದು ರೋಹಿಣಿ ತಿಳಿಸಿದಳು.

"ದೂರ ಇದೆಯಲ್ಲ".

"ನಮ್ಮಂತವರಿಗೆ ಅಷ್ಟುದೂರವೆನಿಸುವುದಿಲ್ಲ. ದಿನಂಪ್ರತಿ ಶಾಲೆಗೆ ನಡೆದು ನಡೆದು ಅಭ್ಯಾಸವೂ ಆಗಿದೆ".

"ಒಬ್ಬಾಕೆಗೇ ಹೋಗಲು ಬೇಸರವಾದೀತು"

"ಆಗಲಿಕ್ಕಿಲ್ಲ. ರಸ್ತೆಯಲ್ಲಿ ನೂರಾರು ಜನ ಅತ್ತಿತ್ತ ತಿರುಗುತ್ತಿರುತ್ತಾರೆ."

"ಅವರು ಕೇಳಿದರೆ ಬೈದಾರು ನೀನು ಟಾಂಗಾದಲ್ಲೇ ಹೋಗಿಬಾ. ಕೆಲಸಗಿತ್ತಿಯುವಳನ್ನು ಕಳಿಸಿ ಟಾಂಗಾ ತರಿಸು".

"ಅತ್ತೇ, ಟಾಂಗಾ ತರಿಸಲು ಸ್ಟೇಶನಿಗೆ ತೆರಳಬೇಕು. ಇಲ್ಲದಿದ್ದರೆ ಮಾರ್ಕೇಟಿಗೆ. ಬೇಗ ಬರುವಂತೆಯೂ ಇಲ್ಲ. ಒಂದಕ್ಕೆರಡು ಬಾಡಿಗೆಯನ್ನು ಕೇಳುತ್ತಾರೆ. ಅದಕ್ಕಿಂತ ರಸ್ತೆಯ ಬದಿಯಲ್ಲಿ ನಿಂತರೆ ಸ್ಟೇಶನಿನಿಂದ ಪೇಟೆಗೆ ತೆರಳುವ ಟಾಂಗಾಗಳು ಸದಾ ಬರುತ್ತಿರುತ್ತವೆ. ಹಾಗೆ ಮಾಡಿದರೆ ಆಗದೇ".

"ಹೇಗಾದರೂ ಮಾಡು. ಕತ್ತಲಾಗುವುದರೊಳಗೆ ಮನೆಸೇರಿದರೆ ಸರಿ".

"ಸರಿ" ಎಂದ ರೋಹಿಣಿ ಒಂದುದಿನ ಸಾಯಂಕಾಲ ಕೈಚೀಲ ಹಿಡಿದುಕೊಂಡು ಮನೆಯಿಂದ ಹೊರಬಿದ್ದಳು.

## ಏಳನೆಯ ಅಧ್ಯಾಯ

ರೋಹಿಣಿ ತಾರ್ ರಸ್ತೆಯ ವರೆಗೆ ಬಂದು ಆದರ ಮಗ್ಗುಲಲ್ಲಿರುವ ಒಂದು ಹುಣಸೆ ಮರದ ಬುಡದಲ್ಲಿ ನಿಂತುಕೊಂಡಳು. ಹೂತ ಹುಣಸೆ ಮರದಿಂದ ಒಣಗಿದ ಒಂದೊಂದೇ ಹೂವು ಅವಳ ತಲೆಯ ಮೇಲೆ ಉದುರಿತು. ಮರದ ರೆಂಬೆಯಲ್ಲಿ ಕುಳಿತ ಆಳಿಲು ಇನಿಯಳನ್ನು ಕರೆಯಲು ಪ್ರೇಮಗಾನಕ್ಕೆ ತೊಡಗಿತು. ರೇಲ್ವೆ ಸ್ಟೇಶನಿನಿಂದ ಕೆಲವು ಟಾಂಗಾಗಳೂ ಓಡುತ್ತೋಡುತ್ತ ಬಂದುವು. ಒಂದೆರಡು ಟಾಂಗಾಗಳಲ್ಲಿ ಬರೀ ಗಂಡಸರು ಮತ್ತೆ ಕೆಲವು ಟಾಂಗಾಗಳಲ್ಲಿ ಸ್ತ್ರೀಯರೂ ಪುರುಷರೂ ತುಂಬಿದ್ದರು. ಖಾಲಿ ಅಥವಾ ಒಬ್ಬಿಬ್ಬರು ಹೆಣ್ಣುಮಕ್ಕಳು ಕುಳಿತ ಟಾಂಗಾಗಳೇ ಇರಲಿಲ್ಲ. ನಿಂತು ಪ್ರಯೋಜನವಿಲ್ಲ ಎಂದವಳು ಕಾಲ್ನಡಿಗೆಯಿಂದಲೇ ಪೇಟೆಯ ಕಡೆ ನಡೆಯಲಾರಂಭಿಸಿದಳು. "ವಾಪಾಸು ಬಂದಾಗ ಟಾಂಗಾ ಬಾಡಿಗೆಗೆ ಗೊತ್ತು ಮಾಡಿದರಾಯಿತು" ಎಂದವಳ ವಿಚಾರ. ಮತ್ತೆ ಅದೊಂದೇ ಯೋಜನೆಯೂ ಅಲ್ಲ ಅವಳ ತಲೆಯಲ್ಲಿ. ವಿಚಾರ ಭಾರದಿಂದಲೋ ಏನೋ ತಲೆತಗ್ಗಿಸುತ್ತ ಅವಳು ರಸ್ತೆಯ ಒಂದು ಬದಿಯಲ್ಲಿ ಸಾಗಿದ್ದಳು. ಅವಳ ಮುಂದಿನಿಂದ ಅನೇಕರು ತೆರಳುತ್ತಿದ್ದರು ಮತ್ತು ಆಗಾಗ ಕತ್ತುತಿರುಗಿಸಿ ಅವಳನ್ನು ನೋಡುತ್ತಿದ್ದರು. ಕೆಲವರು ಇದಿರಾಗಿ ಬರುತ್ತಿದ್ದರು. ಈ ಧಾರವಾಡ ಸೀಮೆಯ ರಸ್ತೆಗಳಲ್ಲಿ ಮನುಷ್ಯರು ಸಂಚರಿಸಿದಾಗ ಎಮ್ಮೆ, ಎತ್ತು ಕೋಣಗಳು ದಾರಿ ಬಿಟ್ಟು ಕೊಟ್ಟು ಬದಿಗೆ ಸರಿಯುವುದಿಲ್ಲ. ಅದರಂತೆ ಸ್ತ್ರೀಯರಿಗೆ ದಾರಿ ಬಿಟ್ಟು ಕೊಡುವ ಸಭ್ಯತನ ಗಂಡಸರಲ್ಲೂ ಕಡಿಮೆ ಆದುದರಿಂದ ರೋಹಿಣಿಯೇ ಸರಿದು ದಾರಿ ಬಿಟ್ಟು ಕೊಡುತಿದ್ದಳು. ಅವಳ

ಹಿಂಬದಿಯಿಂದ ಬೂಟು ಮತ್ತು ಚಪ್ಪಲಿಗಳ ಶಬ್ದವೂ ಅವಳಿಗೆ ಕೇಳಿಸುತ್ತಿದೆ. ಆದರೆ ಕೊಡೆ ಬಿಡಿಸಿ ಅವಳು ಹಿಡಿದುಕೊಂಡಿದ್ದುದರಿಂದ ಅದನ್ನು ಸರಿಸಿ ಯಾರು ಎಂದು ಹಿಂತಿರುಗಿ ಅವಳು ನೋಡಲಿಲ್ಲ.

ತಾರ್ ರಸ್ತೆ ಬಿಟ್ಟು ಧೂಳಿನ ರಸ್ತೆ ಹಿಡಿದು ರೋಹಿಣಿ ಕೆಲವು ಹೆಜ್ಜೆಗಳನ್ನಿಟ್ಟಿದ್ದಳಷ್ಟೆ. ಅಷ್ಟರಲ್ಲಿ, " ರೋಹಿಣೀ, ರೋಹಿಣೀ " ಎಂದು ಯಾರೋ ಕರೆದಂತೆ ಕೇಳಿಸಿತು. ಅಪಾಯ ಸರಪಳಿಯನ್ನು ಹಿಡಿದೆಳೆದಾಗ ನಿಲ್ಲುವ ರೇಲ್ವೆ ಗಾಡಿಯಂತೆ ರೋಹಿಣಿ ಒಮ್ಮೆಯೇ ನಿಂತು ಬಿಟ್ಟಳು. ಕೊಡೆಯನ್ನು ಸರಿಸಿ ಹಿಂದೆ ತಿರುಗಿ ನೋಡಿದಳು. ನೋಡಿ ತನ್ನ ಕಣ್ಣನ್ನು ತಾನೇ ನಂಬಲಾರದೆ ಬೆಪ್ಪು ಬೆರಗಾಗಿ "ಚಂದ್ರಮೋಹನ್" ಎಂದು ತನ್ನೊಳಗೆ ಉಸುರಿದಳು.

ಚಂದ್ರಮೋಹನ ಉಬ್ಬಸ ಬಿಡುತ್ತಿದ್ದ. ಹಿಂದೆ ಬಾಚಿದ್ದ ಅವನ ತಲೆಗೂದಲು ಗಾಳಿಗೆ ಕೆದರಿದ್ದಿತು. ಅವನು ಕಟ್ಟಿಕೊಂಡಿದ್ದ " ನೆಕ್‌ಟೈ " ಅವನ ಎದೆಯ ಮೇಲೆ ಅತ್ತಿಂದಿತ್ತ ಹಾರಾಡುತ್ತಿತ್ತು. ತೆಳ್ಳಗಿನ ಉದ್ದ ಆಳು. ಉದ್ದನ್ನ ಇಜಾರವೂ ಅವನಿಗೆ ಒಪ್ಪುತ್ತದೆ. ಮಡಚಿದ್ದ ಎಡಗೈ ಮೇಲೆ ತನ್ನ ಕೋಟನ್ನು ಹಾಕಿಕೊಂಡಿದ್ದ. ಅವನ ಮುಖ ಅಂದಗೆಟ್ಟಿದೆ. ನಿಸ್ತೇಜವಾಗಿದೆ. ಕಣ್ಣಿಗೆ ಕಾಡಿಗೆ ಹಚ್ಚಿಕೊಂಡವರಂತೆ ಕೆಳಗಿನ ಕಣ್ಣೆವೆಗಳು ಕಪ್ಪಗಾಗಿವೆ. ನಿದ್ದೆ ಬಿಟ್ಟವರಂತೆ, ನಿದ್ದೆಕೆಟ್ಟವರಂತೆ ಕೆಂಪಡರಿವೆ ಆ ದೃಷ್ಟಿಯಲ್ಲೂ ಹಾಹಾಕಾರ! ಸಮೀಪ ಬಂದು ' ರೋಹಿಣೀ ರೋಹಿಣೀ" ಎಂದು ಊರ್ಧ್ವಶ್ವಾಸ ಬಿಡುವವನಂತೆ ಉಸುರಿದ.

ತಿರುಗಿ ನೋಡಿದ ರೋಹಿಣಿ ಕಲ್ಗಂಬದಂತೆ ನಿಂತಿದ್ದಳು. ಒಮ್ಮೆಯೂ ಕಣ್ಣೆವೆಗಳನ್ನು ಮುಚ್ಚಲಿಲ್ಲ. ಅರೆದೆರೆದ ಬಾಯಿ ಹಾಗೆಯೇ ಇದೆ. ಅವಳ ಶರೀರವೆಲ್ಲ ಕಂಪಿಸುತ್ತಿದೆ. ಕಾಲುಗಳು ನಡುಗಲಾರಂಭಿಸಿವೆ. ಏನೋ ಹೇಳಲು ಅವಳ ಆಸೆ. ಹೇಳಲಾರದವಳಾಗಿದ್ದಾಳೆ. ಕಕ್ಕಾವಿಕ್ಕಿಯಾಗಿ ಅವನನ್ನೇ ನೋಡುತಿದ್ದಾಳೆ. ಅವಳ ಬಳಿಗೆ ಬಂದ ಮೋಹನ " ರೋಹಿಣೀ ರೋಹಿಣೀ " ಎಂದು ಮತ್ತೆ ಕರೆದ.

ರೋಹಿಣಿಯ ಕಣ್ಣುಗಳಲ್ಲಿ ನೀರು ತುಂಬಿತು. ಅದನ್ನು ಒರಸಿಕೊಳ್ಳಲು ಸೆರಗಿನ ತುದಿಯನ್ನು ಕಣ್ಣಿಗೆ ತಂದುಕೊಂಡಳು. ಕಣ್ಣು

ಸ್ವಚ್ಛವಾಗಿ ತೊಳೆದು ಹೋದುದರಿಂದ ಈಗ ಅವಳಿಗೆ ರಸ್ತೆ ಕಾಣಿಸಿತು. ತಾನು ಸಾರ್ವಜನಿಕ ರಸ್ತೆಯಲ್ಲಿದ್ದೇನೆಂಬ ಅರಿವುಂಟಾಯಿತು. ಭಯ ಲಜ್ಜೆ ವಿಸ್ಮಯಗಳಿಂದ ಅತ್ತಿತ್ತ ನೋಡಲಾರಂಭಿಸಿದಳು. ನೂರಾರು ಜನ ತಿರುಗುವ ರಸ್ತೆ. ಅವರ ದೃಷ್ಟಿ ಯಾವಾಗಲೂ ಸ್ತ್ರೀಯರ ಮೇಲೆಯೇ ಸ್ತ್ರೀಯರನ್ನು ಕಂಡೊಡನೆ ಅವರ ಸಮೀಪದಿಂದ ಹಾದು ಹೋಗಲು ಎಲ್ಲರ ಆತುರ. ಅವರ ಕಿವಿಗಳು ಹರಿಣದಷ್ಟು ಸೂಕ್ಷ್ಮ. ನಾಲಿಗೆ ಮಸೆದ ಕತ್ತಿ. ಅಣ್ಣ ತಂಗಿ ರಸ್ತೆಯ ಪಕ್ಕದಲ್ಲಿ ನಿಂತು ಮಾತಾಡಿದರೂ ನಾಲಿಗೆ ಸಡಿಲಿ ಸುತ್ತದೆ ಜಗತ್ತು. ಆದುದರಿಂದ ತಮ್ಮ ವರ್ತನೆ ಬೀದಿಯ ಜನಕ್ಕೊಂದು ಪ್ರೇಕ್ಷಣೀಯ ದೃಶ್ಯವಾಗಬಾರದೆಂದು ರೋಹಿಣಿ ನೆನಸಿ ಬೇಗನೇ ಚೇತರಿಸಿ ಕೊಂಡಳು. ವಿವರ್ಣವಾಗಿದ್ದ ಅವಳ ಮೋರೆ ಸ್ಥಿಮಿತಕ್ಕೆ ಬಂದಿತು. ಕಾಲುಗಳು ಸ್ಥಿರವಾದುವು. "ನೀವೇನು ?" ಎಂದು ಕೇಳಿ ಅವಳು ಮತ್ತೆ ನಡೆಯ ತೊಡಗಿದಳು.

"ಹೌದು ನಾನು"

"ನೀವು ಊರಿನಲ್ಲಿ ಇರಲಿಲ್ಲವಂತೆ. ಅಲ್ಲವೇ ?"

"ಇರಲಿಲ್ಲ"

"ಎಲ್ಲಿಗೆ ಹೋಗಿದ್ದಿರಿ ?"

"ನಮ್ಮ ಬಳಗದವರ ಮನೆಗೆ ಹೋಗಿದ್ದೆ."

"ಎಲ್ಲಿ ?"

"ಸೊಲ್ಲಾಪುರದಲ್ಲಿ"

"ಮತ್ತೆ ಯಾವಾಗ ಬಂದಿರಿ ?"

"ನಿನ್ನೆ ಬಂದಿದ್ದೆ. ನಿನ್ನೆಯೇ ನೀನಿದ್ದಲ್ಲಿ ಬಂದು ನೋಡಿ ಹೋಗಲು ಆಸೆಯಾಗಿತ್ತು. ಮೊಳಮಡ್ಡಿಯ ವರೆಗೂ ಬಂದಿದ್ದೆ. ಮತ್ತೆ ಕಾಲುಗಳು ಹಿಂದೆ ಸರಿದುವು. ಈ ಹೊತ್ತೂ ಅಲ್ಲಿಗೆ ಹೊರಟಿದ್ದೇನೆ. ನಿನ್ನ ಮೋರೆ ಕಂಡಿತು. ಓಡುತ್ತ ಬಂದೆ".

ರೋಹಿಣಿ ಸ್ವಲ್ಪ ಕುತೂಹಲದಿಂದಲೇ ಕೇಳಿದಳು. "ನಿಮಗೆ ಹುಚ್ಚುಗಿಚ್ಚು ಹಿಡಿಯಿತೇನು ?"

"ಹುಚ್ಚನಂತಾಗಿದ್ದೇನೆ"

"ಹೌದು. ಅದರ ಲಕ್ಷಣಗಳು ಕಾಣುತ್ತಿವೆ. ಇಲ್ಲದಿದ್ದರೆ ನೀವು ಈರೀತಿ ಮಾತನಾಡುತಿದ್ದಿಲ್ಲ".

"ಯಾಕೆ ರೋಹಿಣೀ ?"

"ನಿಮಗೆ ಗೊತ್ತಾಗುವುದಿಲ್ಲವೇ ?"

"ಗೊತ್ತಾಗುತ್ತದೆ. ನೀನು ಅದನ್ನು ಬಾಯಿಬಿಚ್ಚಿ ಹೇಳುವುದು ಅನವಶ್ಯ. ನನಗೆ ಗೊತ್ತಿದೆ. ನೀನು ಪರಸ್ತ್ರೀ. ಅದನ್ನು ನೆನಸಿ ಕೊಂಡೇ ತಲೆ ಕೆಟ್ಟುಹೋಗಿದೆ. ಏನುಮಾಡೋಣ ಏನುಮಾಡಬಾರದೆಂಬ ವಿವೇಕವೇ ಕರಗಿದೆ. ನೀನು ಪರಸ್ತ್ರೀ ಎಂದು ಬುದ್ಧಿ ಹೇಳುತ್ತದೆ. ಮನಸ್ಸು ಅದನ್ನು ಕೇಳುವುದಿಲ್ಲ. ನಂಬುವುದಿಲ್ಲ. ಮನಸ್ಸಿನಲ್ಲಿ ನಿನ್ನ ಚಿತ್ರ ಮೂಡಿದೆ."

ಅವಳು ನಿಟ್ಟುಸಿರಿಟ್ಟಳು.

ಮೋಹನನೇ ಮೋಹದ ಮಾತುಗಳನ್ನಾಡಿದ. "ರೋಹಿಣೀ, ಏಕವಚನದಿಂದ ನಾನು ಕರೆಯುತ್ತಿದ್ದೇನೆ. ಅದಕ್ಕಾಗಿ ಕ್ಷಮಿಸು. ಬಾಲ್ಯದಿಂದಲೂ ಈ ನಾಲಿಗೆಗೆ "ರೋಹಿಣೀ, ರೋಹಿಣೀ" ಎಂದು ಕರೆದು ಕರೆದು ಬಹಳ ಸಲಿಗೆ ಬಿದ್ದಿದೆ. ನೆರೆಮನೆಯಲ್ಲಿದ್ದ ನೀನು ನಮ್ಮಮನೆಗೆ ಯಾವಾಗಲೂ ಬರುತಿದ್ದಿ. ನಿನ್ನೊಡನೆ ಚಂಡು ಬಗರಿ ಆಡಿದ ನೆನಪು ಈಗಲೂ ಇವೆ ನನಗೆ. ತಿನ್ನಲು ಕೊಟ್ಟಾಗಒಟ್ಟಿಗೆ ತಿನ್ನುತಿದ್ದೆವು. ಕೈಕೈ ಹಿಡಿದು ಕುಣಿದೆವು. ನಿನ್ನ ಕೈಹಿಡಿದುಕೊಂಡು ನಾನು ಎಷ್ಟೋಸಲ ಶಾಲೆಗೆ ಕರೆದು ಕೊಂಡು ಹೋದುದುಂಟು. ನೀನು ದೊಡ್ಡವಳಾದಾಗ ನನ್ನ ಆಶೆಯೂ ದೊಡ್ಡದಾಯಿತು. ದೊಡ್ಡಗಾಳಿಗೋಪುರ ಕಟ್ಟಿಕೊಂಡೆ. ಅದರಲ್ಲಿ ನಿನ್ನ ಸುಂದರ ಮೂರ್ತಿಯನ್ನಿಟ್ಟು ಆರಾಧಿಸಿದೆ. ಪ್ರೇಮ ಪೂಜಾರಿಯಾಗಿ ಭಿಕ್ಷೆಬೇಡಿದೆ. ನೀನು ಹಸಾದ ಕೊಡಲು ನಿರಾಕರಿಸಲಿಲ್ಲ. ನನ್ನ ಹೃದಯದಲ್ಲೇ ನೆಲೆನಿಂತೆ. ಜೀವನದ ವಸಂತವಲ್ಲಿ ಸೌರಭ ರಾಗವನ್ನು ಹಾಡುವಿಯೆಂದು ನಂಬಿದ್ದೆ ರೋಹಿಣೀ"

ರೋಹಿಣಿ ಬಿಕ್ಕಿಬಿಕ್ಕಿ ಅಳತೊಡಗಿದಳು.

ಆವನು ಗದ್ಗದಿತ ಸ್ವರದಿಂದ ನುಡಿದ. "ರೋಹಿಣಿ, ನಿನ್ನನ್ನು ನಾನು ಲಗ್ನವಾಗಲು ಬಯಸಿದ್ದೆ. ಎಷ್ಟೋ ಸಲ ನಿನಗೆ ತಿಳಿಸಿದ್ದೆನಲ್ಲ. ನೀನು ಹಾಯ್‌ಸ್ಕೂಲಿನಿಂದ ಮನೆಗೆ ಬರುತ್ತಿದ್ದಾಗ ದಾರಿಯಲ್ಲಿ ನಾನು

ಭೆಟ್ಟಿಯಾಗುತ್ತಿದ್ದೆ. ಆಗ ಮಾತನಾಡಿದ ಮಾತುಗಳನ್ನು ನೆನಸಿಕೋ. ಒಮ್ಮೊಮ್ಮೆ ಗಾಳಿ ಸವಾರಿಗೆ ತೆರಳಿದಾಗ ಇಬ್ಬರೂ ಒಂದೆಡೆ ಸಂಕೇತ ಸ್ಥಳದಲ್ಲಿ ಕೂಡುತಿದ್ದೆವು. ಆ ಮರಗಳ ಬುಡಗಳಲ್ಲಿ ಕುಳಿತು ಭವಿಷ್ಯಜ್ಜೀವನದ ಬಗ್ಗೆ ಕಟ್ಟಿದ್ದ ಸುಂದರ ಕಲ್ಪನೆಗಳನ್ನು ಸ್ಮರಿಸು. ನೀನು ಕಲಿಸಿದ ಪ್ರೇಮ ಸಂಗೀತ ಇನ್ನೂ ನನ್ನ ಆತ್ಮದಲ್ಲಿ ಧ್ವನಿಗುಡುತ್ತಿದೆ. ಅದರ ಚರಣ ಚರಣಗಳೆಲ್ಲ ನಿನಗೆ ಮರೆತು ಹೋಯಿತೇ ? ಹೀಗೇಕೆ ಮಾಡಿದೆ ರೋಹಿಣೀ ?''

"ನಾನು ಏನು ಮಾಡಿದೆ ?"

"ಏನು ಮಾಡಬಾರದಿತ್ತೋ ಅದನ್ನೇ ಮಾಡಿದೆ".

"ಹೌದು ಮೋಹನ್. ನಾನು ನಿಮ್ಮನ್ನು ಲಗ್ನವಾಗಬೇಕಿತ್ತೆಂದು ನೀವು ಹೇಳುವುದಲ್ಲವೇ ?''

"ಹೌದು''.

ಮೋಹನ್, ನಾನೊಂದು ಪ್ರಶ್ನೆ ಕೇಳುತ್ತೇನೆ. ಉತ್ತರಕೊಡುತ್ತೀರಾ?'

"ಏನು? ಕೇಳು''

"ನೀವು ಕಾಲೇಜಿಗೆ ತೆರಳಿದವರು ಬಹಳ ಓದಿಕೊಂಡಿದ್ದೀರಿ. ಈಗಲೂ ಓದುತ್ತಿರುವಿರಿ. ನಿಮ್ಮ ಯೋಗ್ಯತೆ ನನಗಿಲ್ಲ''.

"ಇರಲಿ''

"ನೀವು ಇನ್ನೂ ಕಲ್ಪನೆಯ ಮುಗಿಲುಗಳಲ್ಲೇ ವಿಹರಿಸುತಿದ್ದೀರಿ. ನಿಮ್ಮ ಕಾಲುಗಳು ನೆಲದ ಮೇಲಿಲ್ಲ. ಕಾಲ, ಪರಿಸ್ಥಿತಿಯನ್ನು ನೀವು ಚೆನ್ನಾಗಿ ಕಂಡುಕೊಂಡಂತೆ ತೋರುವುದಿಲ್ಲ. ಇದು ಇನ್ನೂ ತ್ರೇತ, ದ್ವಾಪರ ಕಾಲಗಳೆಂದೇ ತಿಳಿದಿದ್ದೀರಾ ? ಅಂದಿನ ಕಾಲದಲ್ಲಿ ಬೇಕಾದ ಗಂಡನನ್ನು ಆರಿಸಿಕೊಳ್ಳಲು ಸ್ತ್ರೀಯರು ಸ್ವತಂತ್ರರಿದ್ದರಂತೆ! ಸ್ವಯಂವರದ ಅನೇಕ ಕಥೆಗಳನ್ನು ನಾನು ಓದಿಕೊಂಡಿದ್ದೇನೆ. ನಿಮಗಾದರೂ ಗೊತ್ತಿಲ್ಲದ ಸಂಗತಿಗಳಲ್ಲ. ನಾನು ಅದರಂತೆ ಮಾಡಬೇಕಾಗಿತ್ತೇ ? ಹಾಗೆ ಮಾಡಬೇಕಾಗಿತ್ತೆಂದು ನಿಮ್ಮ ವಿಚಾರವೇ ?''

ಮೋಹನ ನಿರುತ್ತರನಾದ

ರೋಹಿಣಿ ತನ್ನ ಹೃದಯವನ್ನು ತೋಡಿಕೊಂಡಳು. " ನೀವು

ಗೋವುಗಳನ್ನು ನೋಡಿದ್ದಿರಿ. ಅದು ಪಶುಎಂದು ನಮ್ಮೆಲ್ಲರ ತಿಳುವಳಿಕೆ. ಆದರೆ ಅದಕ್ಕೂ ಹಸಿವೆ ನೀರಡಿಕೆಗಳುಂಟು. ಅದೂ ನೇಹಕ್ಕೆಳಸುತ್ತದೆ. ಮಮತೆಯಿಂದ ಕರುಗಳನ್ನು ನೆಕ್ಕುತ್ತದೆ. ಗುಡ್ಡದ ಹಸುರು ಹುಲ್ಲನ್ನು ನೆನಸಿಕೊಳ್ಳುತ್ತದೆ. ಕಷ್ಟಸುಖಗಳನ್ನು ಮೇವಿನೊಂದಿಗೆ ಅದೂ ಮೆಲು ಕಾಡುತ್ತದೆ. ಒಮ್ಮೊಮ್ಮೆ ಅದರ ಕಣ್ಣುಗಳಲ್ಲಿಯೂ ನೀರು ಧಾರಾಕಾರವಾಗಿ ಸುರಿಯುತ್ತಿರುತ್ತದೆ. ಸುಖದುಃಖಗಳ ಅನುಭವ ಅದಕ್ಕೂ ಇರಲೇ ಬೇಕು. ಆದರೆ ಅದರದು ಮೂಕ ಸಂಕಟ. ಯಾರಿಗೂ ಗೊತ್ತಾಗುವು ದಿಲ್ಲ. ಅಥವಾ ಅದನ್ನು ತಿಳಿಯಲು ಯಾರೂ ಯತ್ನಿಸುವುದಿಲ್ಲ. ಅದರ ಕೊರಳಿನ ಹಗ್ಗ ಬಿಚ್ಚುವವರೇ ಕಡಿಮೆ. ಗುಡ್ಡಕ್ಕೆ ತೆರಳಿ ಇಷ್ಟಾನುಸಾರ ತಿನಲಿ ಎಂದು ಬಿಡುವವರು ವಿರಳ. ಬಿಟ್ಟರೂ ಅದು ಹಿಂಡಿನೊಡನೆ ಕೂಡಿ ಕೊಂಡಿರಬೇಕು. ಆಚೆ ಈಚೆ ತೆರಳುವಂತಿಲ್ಲ. ಅದರ ಕೊರಳಿಗೊಂದು ಕೊದಡನ್ನು ಕಟ್ಟುವರು. ಕೊರಳಿಗೆ ಹಗ್ಗ ಸುತ್ತಿ ಮರಕ್ಕೆ ಬಿಗಿಯುವುದೂ ಇದೆ. ಆಚೀಚೆ ಸುಳಿದಾಡಲು ಅದಕ್ಕೆ ಅಶಕ್ಯ. ಆ ಚೌಕಟ್ಟಿನಲ್ಲೇ ಇರ ಬೇಕಾಗುತ್ತದೆ. ಹಟ್ಟಿಯಿಂದ ಹೊರಗೆ ಬಿಡದೆ ಅಲ್ಲೇ ಕಟ್ಟಿ ಮೇವನ್ನು ಎಸೆಯುವವರಿದ್ದಾರೆ. ಒಗೆದ ಮೇವನ್ನು ಮತ್ತು ಒಗೆದಾಗಲೇ ಅದು ತಿನ ಬೇಕು. ಬೇರೆ ಗತ್ಯಂತರವಿಲ್ಲ. ನಮ್ಮ ಸಮಾಜದಲ್ಲಿ ಸ್ತ್ರೀ ಪಶು ಸಮಾನ ಮೋಹನ್. ಗಂಡಸರು ಒಳ್ಳೇಯದನ್ನೇ ಮಾಡಲಿ, ಕೆಟ್ಟದನ್ನೇ ಮಾಡಲಿ ಅದರ ಪರಿಣಾಮ ಹೆಚ್ಚಾಗಿ ಸ್ತ್ರೀಯರ ಮೇಲೆಯೇ ಆಗುತ್ತದೆ. ದುಃಖಗ ಳನ್ನೆಲ್ಲ ಹೆಚ್ಚಾಗಿ ಅವರೇ ಅನುಭವಿಸುತ್ತಾರೆ. ಮತ್ತು ಮೂಕ ಪಶುಗ ಳಂತೆಯೇ ಅನುಭವಿಸಬೇಕು. ನಾನಾದರೂ ಅದಕ್ಕೆ ಅಪವಾದವಾಗಿಲ್ಲ"

" ನನಗೆ ಅರ್ಥವಾಗುತ್ತದೆ ರೋಹಿಣೀ "

" ಮೊದಲೇ ನಿಮಗೆ ಅರ್ಥವಾಗಬೇಕಾಗಿತ್ತು. ಆಗುತಿದ್ದರೆ ಈ ಅನರ್ಥಗಳೆಲ್ಲ ತಪ್ಪುತಿತ್ತು ಮೋಹನ್. ನನಗೆ ವರನನ್ನು ನೋಡುತಿದ್ದಾ ರೆಂದು ನಿಮಗೆ ಗೊತ್ತಿತ್ತು. ನಾನು ಸೂಚಿಸಿರಲಿಲ್ಲವೇ ? ಆಗಲೇ ನೀವು ನಿಮ್ಮ ಕಡೆಯವರಿಗೆ ತಿಳಿಸಿ ಯತ್ನಿಸಬಹುದಿತ್ತು. ನೀವು ಏನೂ ಮಾಡಲಿಲ್ಲ. ಕೊನೆಯ ಗಳಿಗೆಯ ವರೆಗೂ ನಾನು ಕಾದು ಕುಳಿತೆ. ನಿಮ್ಮನ್ನು ಬಹಳ ಹುಡುಕಿದೆ. ನಿಮ್ಮ ಮನೆಗೂ ಒಂದು

ದಿನ ಸಂಜೆ ಬಂದಿದ್ದೆ. ನೀವು ಸೊಲ್ಲಾಪುರಕ್ಕೆ ಹೊರಟು ಹೋಗಿದ್ದಿರಿ ಎಂದು ತಿಳಿಸಿದರು. ನನ್ನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯ್ತು. ಅಂದು ನಾನು ಅತ್ತುದುದಕ್ಕೆ ಅಳತೆಯಿಲ್ಲ. ಧೈರ್ಯ ಬತ್ತಿತು. ಮನಸ್ಸು ಅಲ್ಲೋಲ ಕಲ್ಲೋಲವಾಯ್ತು. ವಿವೇಕ ಕಳೆದು ಕೊಂಡೆ. ಹುಚ್ಚಳಂತಾದೆ. ಬುದ್ಧಿ ಕೆಟ್ಟಕಾಲದಲ್ಲೇ ಮದುವೆಯಾಯ್ತು. ಎಲ್ಲ ಕನಸಿನಲ್ಲಿ ನಡೆದಂತೆ ನಡೆದು ಹೋಯ್ತು! ನಾನೇನು ಮಾಡಲಿ ಮೋಹನ್? ಹೌದು, ನಾನು ದೋಷಿ"

"ರೋಹಿಣೀ, ಯಾರೂ ನಿರ್ದೋಷಿಗಳಿಲ್ಲ" ಎಂದ ಮೋಹನ ಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಅವಳು ತನ್ನ ಕಣ್ಣುಗಳನ್ನು ಒರಸಿ ಕೊಂಡು ಹೇಳಿದಳು. "ನೀವು ಯಾಕೆ ಅಳುತಿದ್ದೀರಿ ಮೋಹನ್? ಹಾಗೆ ಅಳಬಾರದು. ಅದು ಅಳುಬುರುಕುತನದ ಲಕ್ಷಣ. ಅಳಲು ನಿಮಗೆ ಗಂಡಸರಿಗೆ ಅಧಿಕಾರವಿಲ್ಲ. ಸ್ತ್ರೀಯರು ಅಳಬೇಕು. ಮತ್ತು ಹೆಚ್ಚಾಗಿ ಅಳುವವರೂ ಅವರೇ. ಕುಟುಂಬದ ಚರಾಚರ ಸೊತ್ತಿನಲ್ಲಿ ಹೆಣ್ಮಕ್ಕಳಿಗೆ ಪಾಲಿಲ್ಲ. ಪಾಲು ಕೇಳುವ ಹಕ್ಕಿಲ್ಲ. ಲಗ್ನಮಾಡಿಕೊಟ್ಟಾಗಲೇ ಆ ಪಾಲು ಅವರಿಗೆ ಸಂದು ಹೋಗುತ್ತದೆ. ಎಷ್ಟೋ ವೇಳೆ ತಾಯಿ ತಂದೆ ತಮ್ಮ ಹೆಣ್ಮಕ್ಕಳ ಮದುವೆಯ ಕಾಲಕ್ಕೇ ಅವರ ಸೆರಗಿನಲ್ಲಿ ದುಃಖದ ಗಂಟನ್ನು ಕಟ್ಟಿ ಕಳಿಸಿಕೊಡುತ್ತಾರೆ. ಅದೇ ಅವರಿಗೆ ಸಲ್ಲುತ್ತಿರುವ ಪಾಲು. ದುಃಖ, ಶೋಕ ಇವೆಲ್ಲ ನಮ್ಮ ಸೊತ್ತು."

ಮೋಹನ ನಡೆಯಲಸಮರ್ಥನಾಗಿ ನಿಂತು, "ನೀನು ಎಲ್ಲಿಗೆ ಹೊರಟಿದ್ದೀ ರೋಹಿಣೀ?" ಎಂದು ಕೇಳಿದ.

"ಮಾರ್ಕೇಟಿಗೆ"

"ನೀನು ಹೋಗು"

"ನೀವು ಬರುವುದಿಲ್ಲವೇ?"

"ಇಲ್ಲ"

"ಏಕೆ ಆಯಾಸವಾಯಿತೇ?"

"ನೀನು ಹೋಗು." ಎಂದು ಗಟ್ಟಿಯಾಗಿ ಆಜ್ಞಾಪಿಸಿದ.

ರೋಹಿಣಿ ಮರುಮಾತನಾಡದೆ ಹೊರಟು ಹೋದಳು. ಸ್ವಲ್ಪ

ದೂರ ತೆರಳಿದ ಬಳಿಕ ಹಿಂತಿರುಗಿ ನೋಡಿದಳು. ಮೋಹನ ಅಲ್ಲೇ ರಸ್ತೆಯ ಬದಿಯಲ್ಲಿ ನಿಂತಿದ್ದ. ತನಗೆ ಕಣ್ಣಿಗೆ ಕಾಣುವ ವರೆಗೂ ಅವನು ಅತ್ತಿತ್ತ ಕದಲಿರಲಿಲ್ಲ. ಬೇರೆ ರಸ್ತೆಗೆ ಹೊರಳಿದಾಗ ಮಾತ್ರ ಅವನು ಕಣ್ಮರೆಯಾದ. ಆ ಮೇಲೆ ರೋಹಿಣಿ ಬೇಗ ಬೇಗನೇ ಹೆಜ್ಜೆ ಹಾಕತೊಡಗಿದಳು. ಒಂದೊಂದು ಹೆಜ್ಜೆಯನ್ನಿಡುವಾಗ ಅವಳು ತುಂಬ ಭೀತಿಗೊಳಗಾದಳು. ಒಮ್ಮೆ ಮೋಹನನ ಎದೆಯ ಮೇಲೆ ತಾನು ಹೆಜ್ಜೆ ಇಡುತಿದ್ದೇನೆಂಬ ಭಾವನೆ ಅವಳಿಗೆ. ಮತ್ತೊಮ್ಮೆ ಉತ್ತಮನ ಚಿತ್ರ ಅವಳ ಕಣ್ಣಿಗೆ ಕಟ್ಟುತ್ತದೆ. ಅದನ್ನು ಕಂಡು ಅವಳ ಕಾಲುಗಳೇ ನಡುಗುತ್ತಿವೆ. ಅವಳ ಹೃದಯವನ್ನೇ ಒತ್ತಿದಂತಾಗುತ್ತಿದೆ. ತಾನು ಎಲ್ಲಿ ಏಕೆ ಹೋಗುತ್ತಿರುವೆನೆಂಬ ಸ್ಮೃತಿಯೇ ಇಲ್ಲ. ಸ್ವಲ್ಪ ದೂರ ನಡೆದಾಗ ತಾನು ಮಾರ್ಕೇಟನ ರಸ್ತೆ ಬಿಟ್ಟು ಕಾಮನ ಕಟ್ಟಿಯ ದಾರಿ ಹಿಡಿದಿದ್ದೇನೆಂದು ಅವಳಿಗೆ ಗೊತ್ತಾಯಿತು. ಗಕ್ಕನೇ ನಿಂತು, 'ಹಾಂ, ಇಲ್ಲಿಗೇತಕ್ಕೆ ಬಂದೆ ?" ಎಂದು ಮತ್ತೆ ಹೊರಳಿದಳು. ಮಾರ್ಕೇಟ್ ಮುಟ್ಟಿದ ಮೇಲೆ ಬೇಗನೇ ತರಕಾರಿಗಳನ್ನು ಕೊಂಡು ಚೀಲ ತುಂಬಿಸಿದಳು. ಟಾಂಗಾ ಗೊತ್ತು ಮಾಡದೆ ಪುನಃ ಬಂದ ದಾರಿಯಲ್ಲೇ ಹಿಂತಿರುಗಿದಳು. ಮೋಹನ ಮೊದಲು ನಿಂತಲ್ಲಿ ಇದ್ದಿರಲಿಲ್ಲ.

ಆದರೆ ಮಾಳಮಡ್ಡಿಯಲ್ಲಿ ರೋಹಿಣಿ ಅವನನ್ನು ಕಂಡಳು. ತಾರ್ ರಸ್ತೆಯಿಂದ ತಮ್ಮ ಮನೆಗೆ ಕವಲೊಡೆವ ಕಿರುದಾರಿಯ ಸಮೀಪ. ರೋಹಿಣಿ ಪೇಟೆಗೆ ಹೊರಟಾಗ ನಿಂತಿದ್ದ ಹುಣಸೆ ಮರದ ಬುಡವೇ ಅವನ ಆಶ್ರಯ ಸ್ಥಾನವಾಗಿದೆ. ಕಂಡ ರೋಹಿಣಿ ಗಾಬರಿಯಾದಳು. "ನೀವು ಯಾಕೆ ಇಲ್ಲಿ ನಿಂತಿರುವಿರಿ ?" ಎಂದು ಪ್ರಶ್ನಿಸಿದಳು.

"ನನ್ನಿಷ್ಟ" ಎಂಬ ಉತ್ತರ ಹೊರಟಿತು.

"ಏನನ್ನು ನೋಡುತ್ತಿರುವಿರಿ ?" ಎಂದವಳು ಗೊತ್ತಿದ್ದೂ ಕೇಳಿದಳು. ಏಕೆಂದರೆ ಮೋಹನನ ದೃಷ್ಟಿ ಸುಖಸಾಗರ ಬಂಗಲೆಯ ಕಡೆಗೇ ಇದ್ದಿತ್ತು.

ಅವನೆಂದ. "ಆಕಾಶದಲ್ಲೊಂದು ನಕ್ಷತ್ರವನ್ನು ನೋಡುತ್ತಿದ್ದೇನೆ"

"ಮೋಡಗಳು ನಕ್ಷತ್ರವನ್ನು ಮುಸುಕಿವೆ. ಕಾಣುವುದಿಲ್ಲ. ನೀವು

ಮನೆಗೆ ತೆರಳಿರಿ ”

“ ನಾನು ಏನಾದರೂ ಮಾಡುತ್ತೇನೆ. ನೀನು ಹೋಗು ”

ರೋಹಿಣಿ ಮನೆಯ ಕಡೆ ಹೊರಟಳು. ಅವನು ಅಲ್ಲೇ ನಿಂತಿದ್ದ. ಎದೆಗೆ ಕೈಗಳೆರಡನ್ನೂ ಅಡ್ಡ ಕಟ್ಟಿದ್ದ. ಬಿರಿದು ಹೋಗಬಹುದೆಂದು ಅವನ ಅಂಜಿಕೆಯೋ ಏನೋ. ರೋಹಿಣಿ ಮನೆಯ ಗೇಟುಗಳನ್ನು ದೂಡಿ ಪುನಃ ಚಿಲುಕವಿಕ್ಕಿದಾಗ ಸರಳುಗಳ ಎಡೆಗಳಿಂದ ಇಣಿಕಿದಳು. ಹುಣಸೆ ಮರದ ಬುಡದಲ್ಲಿ ಗಂಡಸಿನ ಬಟ್ಟೆಯು ಒಂದು ಚುಕ್ಕಿ ಕಾಣುತಿತ್ತು. ಕತ್ತಲೆ ಆ ಚುಕ್ಕಿಯನ್ನು ಮುಸುಕಿಕ್ಕುವ ವರೆಗೂ ರೋಹಿಣಿ ಆಗಾಗ ಬಂದು ನೋಡುತಿದ್ದಳು.

## ಎಂಟನೆಯ ಅಧ್ಯಾಯ

ಚಂದ್ರಮೋಹನ ತಾಯಿ ತಂದೆಯನ್ನು ಕಳೆದು ಕೊಂಡ ತಬ್ಬಲಿ ಅವನು ಸಣ್ಣ ಮಗುವಾಗಿದ್ದಾಗಲೇ ತಾಯಿ ತೀರಿ ಕೊಂಡರು. ಹೈಸ್ಕೂಲಿಗೆ ತೆರಳುತಿದ್ದಾಗ ತಂದೆ ಕೂಡಾ ಕಣ್ಮುಚ್ಚಿದ್ದರು. ದೊಡ್ಡಣ್ಣನ ನೆರಳಿನಲ್ಲೇ ಅವನು ಬೆಳೆದ. ದೊಡ್ಡಣ್ಣ ವ್ಯಾಪಾರಿ. ಬಾಜಾರದಲ್ಲಿ ಅವನ ಕಟ್ಲೆರಿ ಅಂಗಡಿ ಇದೆ ಹಿರಿಯರ ಮನೆಯಲ್ಲೇ ಹೆಂಡತಿ ಮಕ್ಕಳೊಂದಿಗೆ ಅವನ ವಾಸ. ಸಣ್ಣಣ್ಣ ಹಳ್ಳಿಯಲ್ಲಿ ಹೊಲಮನೆಗಳನ್ನು ಕಟ್ಟಿಕೊಂಡಿದ್ದಾನೆ. ಒಂದು ಹೆಣ್ಣನ್ನು ತಂದೆಯವರು ಜೀವಂತವಿರುವಾಗಲೇ ಪುಣೆಗೆ ಲಗ್ನಮಾಡಿ ಕೊಟ್ಟಿದ್ದರು ಮತ್ತೊಬ್ಬಳನ್ನು ದೊಡ್ಡಣ್ಣ ಸೊಲ್ಲಾಪುರಕ್ಕೆ ಕೊಟ್ಟಿದ್ದ. ಚಂದ್ರಮೋಹನ ಎಲ್ಲರಿಗಿಂತ ಕಿರಿ ಹುಡುಗ. ಆದುದರಿಂದ ದೊಡ್ಡಣ್ಣನೇ ದೊಡ್ಡವನನ್ನಾಗಿ ಮಾಡಿದ.

ಸ್ವತಃ ಮೋಹನನ ದೊಡ್ಡಣ್ಣ ಮಿತವ್ಯಯಿ: ವ್ಯಾಪಾರಿ ಭಾಷೆಯಲ್ಲಿ ಹೇಳುವುದಾದರೆ ಸ್ವಲ್ಪ ಜೀನ. ಅವನು ಆ ಕರೇ ಟೊಪ್ಪಿಗೆ ಕೊಂಡು ಕೊಂಡು ಎಷ್ಟು ವರುಷಗಳಾಯಿತೋ ಏನೋ! ಕೋಟಂತೂ ಬದಲಿ

ಸಿಲ್ಲ. ಧೋತರ ಧೂಳಿನ ಬಣ್ಣ. ಅದನ್ನು ಒಮ್ಮೆಯೂ ಅಗಸನಿಗೆ ಕೊಟ್ಟವನಲ್ಲ. ಎರಡು ಧೋತರಗಳಿಗಿಂತ ಹೆಚ್ಚು ಉಂಟೋ ಇಲ್ಲವೋ! ಅದು ಅವನ ಮನೆಯ ರಹಸ್ಯ! ಧೋತರ ಮಾತ್ರ ಯಾವಾಗಲೂ ಒಂದೇ ರೀತಿ ಇರುತ್ತದೆ. ಅದಕ್ಕೆ ಸಾಬೂನೂ ಹಾಕಿದಂತೆ ಕಾಣುವುದಿಲ್ಲ. ಮೈಗೆ ಸುಗಂಧ ಸಾಬೂನೂ ಅವನಿಗೆ ಬೇಕಾಗುವುದಿಲ್ಲ. ಚಹಾ ಕುಡುಕನೂ ಅಲ್ಲ. ಏಕೆಂದರೆ ಸ್ನಾನ ದೇವರ ಪೂಜೆಯಾಗದೆ ಅವನು ಈ ವೈಲಿಗೆ ಮುಟ್ಟಲಾರ. ಸ್ನಾನ ಪೂಜೆಯಾದಾಗ ಊಟವೇ ಸಿದ್ಧವಾಗುತ್ತದೆ. ಹತ್ತು ಹನ್ನೊಂದು ಗಂಟೆಗೆ ಹೊಟ್ಟೆತುಂಬಾ ತಿಂದು ತೇಗಿ ಅಂಗಡಿಗೆ ತೆರಳುತ್ತಾನೆ. ತೆರಳುವಾಗ ಜೇಬಿನಲ್ಲಿ ಅಡಿಕೆ, ಲವಂಗ, ಕೊಬ್ಬರಿ ಚೂರು, ಏಲಕ್ಕಿ ತುಂಬಿಸಿ ಕೊಳ್ಳುತ್ತಾನೆ. ಯಾವಾಗಲೂ ಒಂದೊಂದು ಚೂರು ಬಾಯಿಗೆ ಕೈ ಎಸೆಯುತ್ತಾ ಇರುತ್ತದೆ. ಚಹಾ ಕುಡಿಯ ಬೇಕೆಂದು ಆಶೆಯಾಗುವುದೂ ಇಲ್ಲ; ಬಾಯಿಗೆ ಅವಕಾಶವೂ ಇಲ್ಲ. ಎಲ್ಲಾದರೂ ಬಹಳ ದೇಹಾಲಸ್ಯವಾಗಿದ್ದರೆ ಅಥವಾ ಬಂಧು ಬಳಗದವರಾಗಲೀ ಪರಮ ಮಿತ್ರರಾಗಲೀ ಪರವೂರಿನಿಂದ ಬಂದಿದ್ದರೆ ಅಂಗಡಿಗೆ ಚಹಾ ತರಿಸಿ ಎರಡು ಕಪ್‌ಗಳಿಂದ ನಾಲ್ಕು ಕಪ್‌ಗಳಿಗೆ ಬಗ್ಗಿಸಿ ಕುಡಿಯುವುದು ಅವನ ಪದ್ಧತಿ.

ದೊಡ್ಡಣ್ಣ ಸಣ್ಣ ವ್ಯಾಪಾರಿ. ಲಕ್ಷಗಟ್ಟಲೆ ಬಂಡವಲು ಹಾಕಿ ತೆರೆದ ಅಂಗಡಿ ಅವನದಲ್ಲ. ಸಣ್ಣ ಅಂಗಡಿ. ದೊಡ್ಡ ಅಂಗಡಿಗಳಿಗೇ ಆಗ ವ್ಯಾಪಾರ ಕಡಿಮೆ. ಸಣ್ಣ ವ್ಯಾಪಾರಸ್ಥರಿಗೆ ಅಂಗಡಿ ಬಾಡಿಗೆ ಹುಟ್ಟುತ್ತಿದ್ದುದೂ ಹರಹರ! ಕೆಲವರು ದಿವಾಳಿ ಕೂಡಾ ತೆಗೆದ ಕಾಲವದು. ಆದರೆ ಅವನು ಊರಿನವನಾಗಿದ್ದುದರಿಂದ ಜನರ ಗುರುತು ಪರಿಚಯ ವಿಶೇಷ. ಹೀಗಾಗಿ ಸ್ವಲ್ಪ ವ್ಯಾಪಾರ ನಡೆದಿತ್ತು. ಸಂಪಾದನೆಯಾದಂತೆ ಅವನಿಗೆ ವೆಚ್ಚವೂ ಇದ್ದಿತು. ಬಾಡಿಗೆ ಕೊಡಬೇಕು; ಹೊಸಮಾಲುಗಳನ್ನು ಆಗಾಗ ತರಿಸಿ ಕೊಳ್ಳಬೇಕು; ಸಂಸಾರದ ಬಂಡಿ ಎಳೆಯಬೇಕು. ಅದು ಸಾಮಾನ್ಯವಲ್ಲ. ಹೊತ್ತವರಿಗೇ ಈ ಹೊರೆಯ ಭಾರ ಗೊತ್ತು. ಅವನ ಕಷ್ಟ ನೋಡಲಾರದೇ ಸಣ್ಣಣ್ಣ ಅರ್ಧದಲ್ಲೇ ಶಾಲೆ ಬಿಟ್ಟಿದ್ದ. ಹಳ್ಳಿಗೆ ಹೋದ ಮೇಲೆ ಆಗಾಗ ಗೋಧಿ, ಜೋಳ, ತೊಗರಿ ಮತ್ತು ಕಾಳು ಬೇಳೆಗಳನ್ನು ಕಳಿಸಲಾರಂಭಿಸಿದ. ಇದರಿಂದ ಅವನಿಗೆ ಎಷ್ಟೋ ಉಪಕಾರ ವಾದಂತಾಗಿತ್ತು.

ದೊಡ್ಡಣ್ಣನಿಗೆ ಓದು ಬರಹ ಬಹಳವಿಲ್ಲ. ಕನ್ನಡ ಶಾಲೆಗಷ್ಟೇ ತೆರಳಿದ್ದ. ಇಂಗ್ಲೀಷು ಅಭ್ಯಾಸ ಮಾಡಿರಲಿಲ್ಲ. ಅವನಿಗೆ ಅಲ್ಪಸ್ವಲ್ಪ ಇಂಗ್ಲೀಷ್ ಬರುತ್ತಿದೆ ಯೇನೋ ನಿಜ. ಗಿರಾಕಿಗಳು ಬಂದು ಇಂಗ್ಲೀಷಿನಲ್ಲಿ ಕೇಳಿದ ವಸ್ತುಗಳನ್ನು ತಪ್ಪದೆ ಕೊಡುತ್ತಾನೆ. ಅಕ್ಷರ ಬಾರದಿದ್ದರೂ ಸಣ್ಣ ಸಣ್ಣ ಡಬ್ಬಿಗಳನ್ನು ತೆಗೆದು " ಗ್ಲೂಕೋಸ್, ಓವಲ್ಟಿನ್, ಹೇರ್‌ಪಿನ್ " ಎಂಬ ಇಂಗ್ಲೀಷ್ ಪದಗಳನ್ನು ಓದಿ ಹೇಳುತ್ತಾನೆ "ಯಸ್, ನೋ" ಹರುಕು ಮುರುಕು ಇಂಗ್ಲೀಷಲ್ಲ. ಅದಕ್ಕಿಂತ ಅಧಿಕ ಶಬ್ದಗಳು ಗೊತ್ತಿವೆ. ಮರಾಠಿಯನ್ನೂ ಹೆಕ್ಕಿ ಹೊಂಡಿರುವನು. ಮುಸಲ್ಮಾನರು ಬಂದರೆ " ಕ್ಯಾ ಹೋನ " ಎಂದು ಅವರ ಭಾಷೆಯಲ್ಲೇ ಮಾತು ಆರಂಭಿಸುತಾನೆ. ವ್ಯಾಪಾರಿಯಾದುದರಿಂದ ಅವನಿಗೆ ಅನೇಕ ಜನರ ಅನೇಕ ಭಾಷೆಗಳ ಸಂಪರ್ಕವಾಗಿದೆ. ಶಾಲೆಗೆ ತೆರಳಿ ಕಲಿತುದುದಕ್ಕಿಂತ ಶಾಲೆಯಿಂದ ಮರಳಿದ ಮೇಲೆ ಕಲಿತುದುದೇ ಅಧಿಕ.

ಹೀಗಿದ್ದರೂ ಕೂಡಾ ತಾನು ಇಂಗ್ಲೀಷ್ ಕಲಿಯಲಿಲ್ಲ ಎಂದು ಅವನು ಒಮ್ಮೊಮ್ಮೆ ನೆನಸಿ ಕೊಳ್ಳುವುದುಂಟು. ಅಥವಾ ತಾನು ಹೆಚ್ಚಿನ ಶಿಕ್ಷಣ ಪಡೆಯಲಿಲ್ಲ ವೆಂಬ ಕೊರತೆಯ ಸ್ಮರಣೆಯೂ ಅದು ಆಗದ್ದಿರ ಬಹುದು. ತಮ್ಮ ಮನೆತನದಲ್ಲಿ ಒಬ್ಬರೂ ಉಚ್ಚ ಶಿಕ್ಷಣ ಪಡೆಯಲಿಲ್ಲ ಎಂಬಿ ಅಭಿಮಾನವೂ ಒಮ್ಮೊಮ್ಮೆ ಅವನನ್ನು ಕಾಡುತಿದ್ದುದುಂಟು. ಹಳ್ಳಿಯಲ್ಲಿದ್ದ ಮತ್ತೊಬ್ಬ ತಮ್ಮ ಹೈಸ್ಕೂಲಿಗೆ ತೆರಳಿದ್ದ. ಆದರೆ ಒಂದು ದರ್ಜೆಯಲ್ಲಿ ನಾಪಾಸಾದೊಡನೆ ಬಿಟ್ಟು ಬಿಟ್ಟ. ದೊಡ್ಡಣ್ಣ ಪರಿಪರಿಯಾಗಿ ಹೇಳಿಕೊಂಡರೂ ಅವನು ಕೇಳಲಿಲ್ಲ. ಆದುದರಿಂದ ಕಿರಿ ತಮ್ಮ ಮೋಹನನಿಗಾದರೂ ತನ್ನ ಕೈಲಾದಷ್ಟು ಕಲಿಸಬೇಕೆಂದು ಹಿಯಣ್ಣನ ಹಿರಿಯಾಸೆ. ಏನಾದರೂ ಮಾಡಬೇಕು; ಹೇಗಾದರೂ ಮಾಡಬೇಕು; ಯಾವ ವೇಷವನ್ನಾದರೂ ಹಾಕಬೇಕು; ಮೋಹನನನ್ನು ಕಾಲೇಜಿಗೆ ಕಳಿಸಬೇಕೆಂದು ಅವನು ನಿರ್ಣಯಿಸಿದ್ದ. ಪದವೀಧರನಾದರೆ ದೊಡ್ಡ ಕೆಲಸ ದೊರೆಯುತ್ತದೆ ನಾಲ್ಕು ಜನ ಶ್ರೀಮಂತರು ತಮ್ಮ ಹೆಣ್ಮಕ್ಕಳನ್ನೂ ಕರೆದುಕೊಂಡು ಮನೆ ಬಾಗಿಲಿಗೆ ಬರುತ್ತಾರೆ. ಕೈಯಲ್ಲಿ ದುಡ್ಡು ಓಡಾಡುತ್ತದೆ. ಹೆಸರು ಬರುತ್ತದೆ ಎಂದು ಮನಸ್ಸಿನಲ್ಲಿ ಮುಂಡಿಗೆ ತಿಂದು ಅಂಗಡಿಯಲ್ಲಿ ಕುಳಿತಾಗ ಆತ್ಮಾಭಿಮಾನದ ತನ್ನ ಮೀಸೆ ತಿಕ್ಕುತಿದ್ದುದೂ ಉಂಟು. ನಾಲ್ಕು ಜನರ ಮುಂದೆ

ನುಡಿದು ಸಂತೋಷದ ಹುರಿಯಾಳಾಗಿ ತೊಡೆ ಚಪ್ಪರಿಸಿದುದೂ ಉಂಟು.

ಮೋಹನನೂ ಕುಶಾಗ್ರಮತಿ. ಅವನು ಒಂದು ದರ್ಜೆಯಲ್ಲೂ ಫೇಲಾಗಿರಲಿಲ್ಲ. ತುಂಬ ಬುದ್ಧಿವಂತ ಹುಡುಗನೆಂದನ್ನಿಸಿ ಕೊಂಡಿದ್ದ. ಯಾವಾಗಲೂ ಓದು ಬರಹದಲ್ಲೇ ಆಸಕ್ತಿ ಆತನಿಗೆ. ಅಂಗಡಿಯಲ್ಲಿ ಒಂದೊಂದು ಸಲ ಬಂದು ಕುಳಿತಾಗಲೂ ಅವನ ಕೈಯಲ್ಲೊಂದು ಪುಸ್ತಕ ವಿರುತ್ತಿತ್ತು. ಶಾಲೆ ಬಿಟ್ಟೊಡನೆಯೇ ಮನೆ ಸೇರುತಿದ್ದ. ದುರ್ವ್ಯಯ ವನ್ನು ಮಾಡುತಿದ್ದಿಲ್ಲ. ಶೋಕಿ, ಅಥವಾ ಪ್ರೋಕ್ರಿ ಕೂಡಾ ಅಲ್ಲ. ಅಣ್ಣನಿಗೆ ಅದರಿಂದ ಅಭಿಮಾನ. ಅತ್ತಿಗೆಗೂ ಅಸಂತುಷ್ಟಿಯಿಲ್ಲ.

ಆದರೆ, ಕಾಲೇಜಿಗೆ ತೆರಳಲು ಆರಂಭಿಸಿದ ಮೇಲೆ ಮೋಹನ ತುಂಬಾ ಪರಿವರ್ತನೆ ಹೊಂದಿದ. ಅವನ ತಲೆಯನ್ನು ಮುಚ್ಚಿಕೊಂಡಿದ್ದ ಕರೀ ಟೊಪ್ಪಿಗೆ ಕರಗಿ "ಆಕ್ಸ್ ಫರ್ಡ್ ಕ್ರಾಪ್" ರೂಪ ಧರಿಸಿತು. ಧೋತರ, ಪೈಜಾಮುಗಳೆಲ್ಲ, ಮೂಲೆ ಪಾಲಾದುವು. ತರತರದ ಪ್ಯಾಂಟ್ ಇಜಾರ ಬೇಕಾಯ್ತು. ಅದಕ್ಕೆ ಬೂಟುಗಳು ಬೇರೆ ಕೋಟು. ಇಂಟರ್ ಮುಗಿವ ವರೆಗೆ ಕುತ್ತಿಗೆಗೆ 'ನೆಕ್‌ಟೈ'' ಇದ್ದಿಲ್ಲ. ಆ ಮೇಲೆ ಅದೂ ಬಂತು ದೊಡ್ಡಣ್ಣನ ಕುತ್ತಿಗೆಗೆ ಉರುಲು.ಅದು ದಿನದಿಂದ ದಿನಕ್ಕೆ ಬಿಗಿಯಾಗು ತ್ತಲೇ ನಡೆಯಿತು. "ಹಾಂ ಹೂಂ" ಮಾತನಾಡುವಂತಿಲ್ಲ, ಮಾತ ನಾಡಲು ಮೋಹನ ದೊರೆಯುವುದೂ ದುರ್ಲಭ. ದೊಡ್ಡಣ್ಣ ಊಟ ಮಾಡಿ ತೆರಳಿದರೆ ಬರುವುದು ರಾತ್ರಿಗೇ. ಮೋಹನನ ಕೋಣೆಯಲ್ಲಿ ದೀಪವಿರುವುದಿಲ್ಲ. ಇದ್ದರೂ ಬಾಗಿಲಿಕ್ಕಿಕೊಂಡು ಚಿಲುಕ ಹಾಕಿಕೊಳ್ಳುವ ಮುಂಜಾನೆಯಾದರೂ ಅಷ್ಟೆ. ಊಟಕ್ಕೆ ಮಾತ್ರ ಅವನು ಮನೆಯಲ್ಲಿ ಕಾಣಿಸಿ ಕೊಳ್ಳುತ್ತಾನೆ. ಉಳಿದ ವೇಳೆ ಅವನೆಲ್ಲೋ! ಅತ್ತಿಗೆ ಕೇಳಿದರೆ "ಕಾಲೇಜು ! ಕಾಲೇಜು" ಇದೊಂದೇ ಉತ್ತರ. ಅವನು ಸಂಜೆ ಎಂಟು ಗಂಟೆಗೆ ಬಂದರೂ "ಕಾಲೇಜು". ಹತ್ತು ಗಂಟೆಗೆ ಮರಳಿದಾಗ ಕೇಳಿದರೂ ಕಾಲೇಜೇ. ಇಷ್ಟು ಕಾಲೇಜಿನ ಮೇಲೆ ಆಸಕ್ತಿಯಿದ್ದರೂ ಅವನು ಪರೀಕ್ಷೆಯಲ್ಲಿ ಪಾಸಾಗಲಿಲ್ಲ.

ಅವನ ಕಾಲೇಜೇ ಬೇರೆ. ರೋಹಿಣಿಯೇ ಆ ಹೊಸ ಕಾಲೇಜಿನ ವಿದ್ಯಾ ಧಿದೇವತೆ ಯಾಗಿದ್ದಾಳೆ. ರೋಹಿಣಿ ಅವನ ಎಳೆತನದ ಒಡನಾಡಿಯಾಗಿ

ದ್ದವಳು. ಸಲಿಗೆಯೂ ಬಹಳ. ಹೈಸ್ಕೂಲಿಗೆ ಚಂದ್ರಮೋಹನ ತೆರಳು ತ್ತಿದ್ದಾಗ ಸಲಿಗೆ ಬೆಳೆದು ಸಖ್ಯವಾಯ್ತು. ಅವನು ಕಾಲೇಜಿಗೆ ತೆರಳಲಾ ರಂಭಿಸಿದ ಬಳಿಕ ಸಖ್ಯದ ಮೊಗ್ಗು ಅರಳಿ ಪ್ರೇಮದ ಸುವಾಸನೆ ಬೀರತೊಡ ಗಿತು. ಅದರಲ್ಲೇ ಅವನು ತನ್ಮಯನಾಗಿ ಹೋದ. ಅವಳ ರೂಪಾತಿ ಶಯವನ್ನು ನೋಡಿದಷ್ಟು ಕಣ್ಣುಗಳಿಗೆ ತೃಪ್ತಿಯಿಲ್ಲ. ಮತ್ತೂ ನೋಡ ಬೇಕು ಮತ್ತೂ ನೋಡಬೇಕು ಎಂದು ಮನಸ್ಸು ಪ್ರಚೋದಿಸುತ್ತಿತ್ತು. ತನ್ನ ಕೋಣೆಯಲ್ಲಿ ಕುಳಿತು ತಾಸು ತಾಸುಗಳ ವರೆಗೆ ಅವಳನ್ನು ನಿರೀಕ್ಷಿಸು ತ್ತಿದ್ದ. ಅವಳು ತಮ್ಮ ಅಟ್ಟದ ಮನೆಯನ್ನೇರಿ ನಿಂತರೆ ಅವಳ**ಕಡೆ** ಸೆಳೆ ನೋಟದಿಂದ ತಾಸುಗಟ್ಟಲೆ ನೋಡುವ. ಪತ್ರಬರೆಯಲು ಅವನಿಗೆ ಸ್ವಲ್ಪ ಕಾಲ ಹಿಡಿಯುತ್ತದೆ. ಅವಳ ಉತ್ತರ ಓದಿದಷ್ಟು ತೃಪ್ತಿಯಿಲ್ಲ. ಮತ್ತೂ ಮತ್ತೂ ಓದುತ್ತಾನೆ. ಕಾಲೇಜಿನಲ್ಲಿ ಕೂಡಾ ಒಮ್ಮೊಮ್ಮೆ ಅದೇ ಪತ್ರ ವನ್ನು ತೆರೆದು ಓದುವುದುಂಟು. ರೋಹಿಣಿಗೆ ಕಥೆ, ಕಾದಂಬರಿಗಳ ಗ್ರಂಥ ಗಳನ್ನು ಹುಡುಕಿ ತಂದುಕೊಡುವುದರಲ್ಲೂ ಅವನು ತನ್ನ ವೇಳೆಗಳೆಯುತ್ತಿದ್ದ. ಅಪರೂಪಕ್ಕೆ ಒಂದೊಂದು ದಿನ ಅವರು ಯಾವುದಾದರೊಂದು ಸಾಂಕೇ ತಿಕಸ್ಥಳದಲ್ಲಿ ಭೆಟ್ಟಿಕೂಡಾ ಆಗುತ್ತಿದ್ದರು. ಆಗಲೇ ಒಮ್ಮೊಮ್ಮೆ ಮದುವೆಯ ಮಾತುಕತೆ ನಡೆಯುತಿತ್ತು ಮತ್ತು ರೋಹಿಣಿಯನ್ನೇ ಮದುವೆಯಾಗು ವುದು ನಿಶ್ಚಯವೆಂದು ಚಂದ್ರಮೋಹನ ನುಡಿದಿದ್ದ.

ಚಂದ್ರಮೋಹನ ಕಲ್ಪನೆಯ ಶಿಖರವನ್ನೇರಿ ವಿಹರಿಸುತಿದ್ದ. ಹೊರತು ವಾಸ್ತವಿಕ ಸಂಗತಿಗಳನ್ನು ಗಮನಿಸಲಿಲ್ಲ. ರೋಹಿಣಿಗೆ ಭರವಸೆ ಕೊಟ್ಟೊ ಡನೇ ಅವಳು ಅವನ ರಾಣಿಯಾದಳೇ? ರಾಣಿಯಾಗುವ ಕೆಲವು ವಿಶಿಷ್ಟ ಆಚಾರಗಳಿವೆಯಲ್ಲ. ಮೋಹನ ಆ ದೆಸೆಯಲ್ಲಿ ಕಾರ್ಯಪ್ರವೃತ್ತನಾಗಲಿಲ್ಲ. ಅವನಿಗೆ ಇಚ್ಛೆ ಇರಲಿಲ್ಲ ಎಂದು ತಿಳಿಯುವುದು ಸರಿಯಾಗಲಾರದು. ಅಭಿ ಲಾಷೆಯನ್ನು ಅಣ್ಣ ಅಥವಾ ಅತ್ತಿಗೆಗೆ ತಿಳಿಸಬೇಕು. ಆದರೆ ಅದರ ಪ್ರಸ್ತಾಪ ವೆತ್ತಲು ಅವನಿಗೆ ಧೈರ್ಯವಾಗಲಿಲ್ಲ. ಏಕೆಂದರೆ ದೊಡ್ಡಣ್ಣ ಮೋಹನನ ಬಗ್ಗೆ ಉಜ್ವಲವಾದ ಭವಿಷ್ಯವನ್ನು ಕಲ್ಪಿಸಿಕೊಂಡಿದ್ದವನು. ಅವನ ಅಪ ಯಶದಿಂದ ಅವನಿಗೆ ವಜ್ರಾಘಾತವಾದಂತಾಗಿದೆ. ಒಮ್ಮೊಮ್ಮೆ ಸಿಟ್ಟೂ ತೋರಿಸಿದ್ದುದುಂಟು. ಮತ್ತೆ ಜಿಗುಪ್ಸೆಯೂ ಬಂದಿತ್ತು. ಅವನ

ಮೋಹನನ ಮಾತುಗಳನ್ನು ಕಿವಿಯಲ್ಲಿ ಹಾಕಿಕೊಳ್ಳುತ್ತಿದ್ದನೋ ಇಲ್ಲವೋ! ಮೋಹನ ಧೈರ್ಯದಿಂದ ಹೇಳುತಿದ್ದರೂ ದೊಡ್ಡಣ್ಣ ಕೇಳುತಿದ್ದನೊ ಅವನು ತುಂಬಾ ಅಭಿಮಾನಿ. ಗಂಡಿನ ಕಡೆಯವರು ತಾವಾಗಿ ಹೆಣ್ಣು ಕೇಳಲು ಹೋಗುವ ಪದ್ಧತಿ ನಮ್ಮ ಸಮಾಜದಲ್ಲಿ ಕಡಿಮೆ. ಆದುದರಿಂದ ದೊಡ್ಡಣ್ಣ ಕೇಳುತಿದ್ದುದೂ ಅಸಂಭವ. ವರನ ಸ್ಥಿತಿಗತಿ ಗೊತ್ತಿದ್ದ ಅವರು ಕೊಡುತಿದ್ದುದೂ ಅಸಂಭವ. ಅಂದಬಳಿಕ ಚಂದ್ರ ಮೋಹನ ಮಾಡುವುದಾದರೂ ಏನು? ರೋಹಿಣಿಯನ್ನು ಕರೆದೊಯ್ದು ರಜಿಸ್ಟರ್ಡ್ ವಿವಾಹವಾಗಬೇಕಿತ್ತೇ' ಅಥವಾ ಯಾವುದಾದರೊಂದು ಗುಡಿಗೆ ತೆರಳಿ ಮಾಲೆಹಾಕಿಸಿಕೊಂಡು ಬರಬೇಕಾಗಿತ್ತೇ? ಹೌದು. ಹೇಳಲು ಸುಲಭ ಆದರೆ ಆರೀತಿಮಾಡಲು ಎಷ್ಟು ಜನರಿಗೆ ಧೈರ್ಯವಿದೆ? ತಾಯಿತಂದೆ ಬಂಧುಬಳಗವನ್ನು ಇದಿರಿಸಲು ಎಷ್ಟು ಜನಸಿದ್ಧರಿದ್ದಾರೆ? ಮನೆತನದ ಕೀರ್ತಿ, ಕುಲದ ಅಭಿಮಾನ. ಸಮಾಜದ ಕಟ್ಟುನಿಟ್ಟು ಸಂಪ್ರದಾಯ ಸದಾಚಾರಗಳನ್ನು ಮೆಟ್ಟಿನಿಲ್ಲುವ ಗಟ್ಟಿಗತನ ಎಷ್ಟು ಜನರಿಗಿದೆ? ಆದುದರಿಂದ ರೋಹಿಣಿಯ ಮದುವೆಯ ಮಾತುಕತೆನಡೆದಾಗ ಚಂದ್ರಮೋಹನ ತಡಬಡಿಸಿದುದು ಸಹಜವೇ ಆಗಿದೆ. ಮನಸ್ಸಿನ ಉದ್ವೇಗವನ್ನು ತಡೆಯಲಾರದೆ ಚಂದ್ರ ಮೋಹನ ಪುಣೆಗೆ ಹೊರಟುಹೋದ. ಅಲ್ಲಿ ಕೆಲವು ತಿಂಗಳುಗಳ ವರೆಗಿದ್ದು ಸೊಲ್ಲಾಪುರ ಸೇರಿದ.

ಆಶೆಯು ಹಿಮಗಿರಿಯನ್ನೇರುವುದು ಮನುಷ್ಯನ ಸ್ವಭಾವ. ಅನೇಕ ವೇಳೆ ಆ ಹಿಮ ಕರಗಿ ನೀರಾಗಿ ಹರಿಯುವುದೂ ಉಂಟು. ಅವನ ಕನಸುಗಳು ತಿರುಕನ ಕನಸುಗಳಾಗಿ ಪರಿಣಮಿಸುತ್ತವೆ. ಮರಳು ದಿನ್ನೆಯಲ್ಲಿ ಕಟ್ಟಿದ ಮಣ್ಣಿನ ಮನೆ ಅಲೆಗಳಿಗೆ ಕೊಚ್ಚಿಹೋಗುತ್ತದೆ. ಪ್ರಣಯ ಪಗಡೆಯಾಟದಲ್ಲೂ ಹಾಗೆಯೇ. ಒಮ್ಮೆ ರಾಣಿ ವಶವಾಗುತ್ತಾಳೆ ಮತ್ತೊಮ್ಮೆ ರಾಜನೇ ಸೋಲುತ್ತಾನೆ. ಏಳು ಬೀಳುಗಳು ಅನಿಶ್ಚಿತ. ಮತ್ತು ಸಹಜವೂ ಆಗಿವೆ. ಅವೆಲ್ಲ ಅವನವನ ಆಟ, ಚೆಲ್ಲಾಟ, ಕ್ರಿಯೆ, ನಿಷ್ಕ್ರಿಯೆ, ಇಚ್ಛಾಶಕ್ತಿ, ದೌರ್ಬಲ್ಯ. ಯೋಗ್ಯಾ ಯೋಗ್ಯತೆಗಳನ್ನು ಅವಲಂಬಿಸಿದೆ. ಅವನವನ ಪೂರ್ವ ಜನ್ಮದ ಸುಕೃತ ದುಷ್ಕೃತಗಳಿಂದು ಕಾರಣ ಕೊಡುವವರುಂಟು. ಹುಟ್ಟಿದ ಗಳಿಗೆಯಿಂದ ಭಾಗ್ಯವನ್ನು ಗುಣಿಸು

ವರು. ಅದೃಷ್ಟ ದುರಾದೃಷ್ಟಗಳ ನಂಬಿಗೆಯ ಮೇಲೆ ಭಾರ ಹಾಕುವವರೂ ಬಹಳ. ಚಂದ್ರಮೋಹನನ ಪ್ರಣಯ ಭಂಗಕ್ಕೆ ಯಾವುದು ಕಾರಣವೋ ಅವರ ಬಗ್ಗೆ ಚಿಂತಿಸುವುದರಲ್ಲಿ ಅರ್ಥವಿಲ್ಲ. ಕಾರ್ಯ ಈಗಾಗಲೇ ಮಿಂಚಿ ಹೋಗಿದೆ. ರೋಹಿಣಿಗೆ ಲಗ್ನವಾಗಿದೆ. ಅವಳು ಪತಿಗೃಹಕ್ಕೆ ಹೊರಟು ಹೋಗಿರುವಳು. ಈಗ ಅವಳು ಪರಸ್ತ್ರೀ. ಚಂದ್ರಮೋಹನನಿಗೆ ಯಾವ ಸಂಬಂಧವೂ ಇಲ್ಲ. ಅವನು ಚಿಂತಿಸುವುದೂ ತಪ್ಪು. ಮತ್ತು ಚಿಂತಿಸಿ ಫಲವೂ ಇಲ್ಲ. ಅವಳನ್ನು ಮರೆತು ಬಿಡುವುದೇ ಯೋಗ್ಯ. ಏನೋ ಹುಡುಗತನ ದಿಂದ ಹುಚ್ಚಾಟ ನಡೆಯಿತು. ಅದು ಕೈಗೂಡಲಿಲ್ಲ ಎಂದವನು ಹಿಂದಿನ ಘಟನೆಗಳನ್ನು ಅಲಕ್ಷಿಸಿಬಿಡಬಹುದಿತ್ತು. ಅದರಂತೆ ಅವನು ಮಾಡುತಿದ್ದರೆ ಅವನ ಬಾಳಿನ ಗ್ರಂಥವೇ ಬೇರೆ ಸ್ವರೂಪ ಧರಿಸುತಿತ್ತೋ ಏನೋ! ಆದರೆ, ಅದರಂತೆ ನಡೆಯಲಿಲ್ಲವಲ್ಲ!

ಪುಣೆಗೆ ಹೋದರೂ ರೋಹಿಣಿಯ ಋಣಾನುಬಂಧ ಅವನನ್ನು ಧಾರವಾಡಕ್ಕೆ ಎಳೆಯಿತು. ಸೊಲ್ಲಾಪುರದಲ್ಲಿ ತಿಂಗಳುಗಟ್ಟಲೆ ನಿಂತರೂ ರೋಹಿಣಿ ಹಾಡಿದ ಪ್ರೇಮ ಸಂಗೀತದ ಸವಿಸೊಲ್ಲು ಅವನ ಕಿವಿಯಲ್ಲಿ ಝೇಂಕರಿಸುತ್ತಿದೆ. ರೇಡಿಯೋ ಅಲೆಯಂತೆ ಅವಳ ಸ್ವರ ಅವನ ಹೃದಯ ವೀಣೆಯನ್ನು ಬಡಿದು ಬಾರಿಸುತ್ತದೆ. ಅವನ ಮನಸ್ಸಿನ ದೂರದರ್ಶಕ ಯಂತ್ರದಲ್ಲಿ ಪದೇ ಪದೇ ರೋಹಿಣಿಯ ಚಿತ್ರ ಕಾಣುತ್ತದೆ. ಅವಳ ಸೌಂದರ್ಯ ಅವನ ಕಣ್ಣನ್ನು ಕುಕ್ಕುತ್ತಿದೆ. ಅವಳ ಮೇಲಿನ ಮೋಹ ಅವನನ್ನು ಅಂಧ ನನ್ನಾಗಿ ಮಾಡಿದೆ. ಪ್ರೇಮ ಉನ್ಮಾದಕ್ಕೆಡೆಗೊಟ್ಟಿದೆ. ರೋಹಿಣಿಯದೇ ಸ್ಮರಣೆ. ಹಗಲಿರಳು ಅವಳದೇ ಭ್ರಮೆ. ಅವಳದೇ ಹಂಬಲ. ಅವಳೇ ಅವನ ಹಸಿವು ನೀರಡಿಕೆ. ಚಂದ್ರಮೋಹನ ಭ್ರಾಮಕ ಮನುಷ್ಯನಾಗಿ ಹೋದ.

ಅವನು ವಿಲಕ್ಷಣ ಪುರುಷನಾಗಿದ್ದಾನೆ. ಅವನ ಭಾವನೆಗಳು ಈಗ ಅತಿ ವಿಚಿತ್ರ. ಪ್ರೇಮ ಪವಿತ್ರವಾದುದು. ಅದು ದೈವೀ ದೇಣಿಗೆ. ವಿಶ್ವದ ಆದಿಯಿಂದ ಅವತಾರ ತಾಳಿದೆ. ವಿಶ್ವವ್ಯಾಪಿಯಾಗಿದೆ. ವಿಶ್ವದ ಅಂತ್ಯದ ವರೆಗೂ ಚಿರಂಜೀವಿ. ಅದು ಕಾಲಾತೀತ. ದೇಶ, ಸಮಾಜ, ಮದುವೆ, ಸಂಪ್ರದಾಯ ಇವುಗಳೆಲ್ಲ ಅದಕ್ಕೆ ಅಡೆತಡೆಗಳಾಗಲ್ಲ. ರೋಹಿಣಿಗೆ ಲಗ್ನವಾದರೆ ಏನಾಯಿತು? ತಾನು ಅವಳಲ್ಲಿ ಅನುರಕ್ತ. ಅವ

ಳಿಗಾದರೂ ತನ್ನ ಮೇಲೆ ಗಾಢವಾದ ಪ್ರೇಮವಿದೆ. ಅದು ಅವನಿಗೆ ಗೊತ್ತು. ಆದುದರಿಂದ ಇನ್ನಾದರೂ ಪರಸ್ಪರ ಪ್ರೀತಿಸುವುದು ಸಹಜವೇ ಅದು ತಪ್ಪಲ್ಲ. ಅದು ಪಾಪವಲ್ಲ. ಪಾಪ ಪುಣ್ಯ ಎಲ್ಲ ಅವನವನ ಭಾವನೆ ಅಜ್ಞಾನವೇ ಪಾಪ. ಮನಸ್ಸಿನ ಆಶೆ ಆಕಾಂಕ್ಷೆಗಳನ್ನು ಹತ್ತಿಕ್ಕಿ ಕೊಳ್ಳುವುದೇ ಅಜ್ಞಾನ. ಅದರಿಂದಲೇ ತಾಪ ಪಾಪಗಳು. ಪ್ರೇಮ ಪಾಪವಲ್ಲವೇ ಅಲ್ಲ. ಹಾಗೆ ಹೇಳುವವರಿಗೆ ಅದರ ಎ. ಬಿ. ಸಿ. ಡಿ ಗೊತ್ತಿಲ್ಲ. ಒಮ್ಮೆ ಒಬ್ಬಳನ್ನು ಮತ್ತೊಮ್ಮೆ ಮತ್ತೊಬ್ಬಳನ್ನು ಪ್ರೇಮಿಸಲು ಸಾಧ್ಯವಿದೆಯೇ? ಹಾಗಿದ್ದರೆ ಅದು ನಿಜವಾದ ಪ್ರೇಮವಾಗಲಾರದು. ಅದು ಢೋಂಗಿ ಪ್ರೇಮ. ಪ್ರೇಮದ ಆಭಾಸ. ಪ್ರೇಮ ಮರೆಯಲಾರದಂತಹುದು. ಅದು ಚಿರಂತನ. ಕ್ಷಣಿಕವಲ್ಲ. ಅಷ್ಟು ಅಗ್ಗವೂ ಅಲ್ಲ. ಹೀನವೂ ಅಲ್ಲ. ಅದರ ನಿಲುವೆ ಉದಾತ್ತವಾದುದು ಮತ್ತು ತಾನಾದರೂ ಉದಾತ್ತ ಪಾತ್ರವನ್ನೇ ಅಭಿನಯಿಸುತಿದ್ದೇನೆ ಎಂದವನ ತರ್ಕ. ಆ ಭ್ರಾಂತಿಯಿಂದಲೇ ಧಾರವಾಡಕ್ಕೆ ಓಡಿ ಬಂದ

ಧಾರವಾಡಕ್ಕೆ ಬಂದ ಚಂದ್ರಮೋಹನ ಪುನಃ ತನ್ನ ಪ್ರೇಮ ಚೇಷ್ಟೆಗಳನ್ನು ಆರಂಭಿಸಿದ. ಸಾಧನ ಕೇರಿ—ಮಾಳಮಡ್ಡಿಗಳ ಮಧ್ಯೆ ಹಾಗೂ ಸುಖಸಾಗರ ಬಂಗಲೆಯ ಸುತ್ತು ಮುತ್ತು ಹಾವಿನಂತೆ ಸುಳಿಯತೊಡಗಿದ ರೋಹಿಣಿ ಮನೆಬಿಟ್ಟು ಹೊರಗೆ ಕಾಲಿಟ್ಟರೆ ಸಾಕು. ಯಾವ ಬಿಲದಿಂದಲೋ ಹೊರಬಿದ್ದು, " ರೋಹಿಣೀ, ರೋಹಿಣೀ " ಎಂದು ಕೂಗಿ ಕೊಂಡು ಬರುವನು. ನೀರವ ರಾತ್ರಿಯಲ್ಲಿ ಅಟ್ಟವನ್ನೇರಿ ರೋಹಿಣಿ ಮಲಗಿ ಕೊಂಡಾಗಲೂ, " ರೋಹಿಣೀ, ರೋಹಿಣೀ " ಎಂದು ಯಾರೋ ಕರೆದಂತೆ ಕೇಳಿಸುತ್ತದೆ ಅವಳಿಗೆ. ಗಾಳಿಗೆ ಬಾಗಿಲಿನ ಕದಗಳು ಬಡಿದರೆ ಅವಳು ಅತ್ತ ಕಣ್ಣು ಹೊರಳಿಸುತ್ತಾಳೆ. ಒಂದೊಂದು ಸಲ ಗೇಟನ್ನೂ ರಾತ್ರಿ ದೂಡಿದ ಶಬ್ದವಾಗುತ್ತದೆ. ರೋಹಿಣಿ ತುಂಬಾ ಅಧೀರಳಾಗಿದ್ದಾಳೆ

ಒಂದುದಿನ ಸಂಜೆ ಬಂಗಲೆಯ ಕಂಪೌಂಡಿನೊಳಗೆ ಆಡುಗಳು ಬಂದಿದ್ದುವು. ಕಲ್ಲೆಸೆಯುತ್ತ, ಒದರುತ್ತ ರೋಹಿಣಿ ಅವುಗಳನ್ನು ಓಡಿಸತೊಡಗಿದಳು. ಗೋಡೆ ಹಾರಿ ಹೋಗಲು ಅವಕ್ಕೆ ಅಸಾಧ್ಯ. ಗೇಟಿನ ಬಳಿ ನುಸುಳಿಕೊಂಡೇ ಒಳಗೆ ಪ್ರವೇಶಿಸಿವೆ ಮತ್ತು ಅದೇ ದಾರಿಯಿಂದ ಹೊರ

ಬಿದ್ದುವು. ರೋಹಿಣಿ ಗೇಟನ್ನು ತೆಗೆದು ಮತ್ತೂ ಒಂದೆರಡು ಕಲ್ಲುಗಳನ್ನು ಹೊಡೆದು "ಹೆ, ಹೇ" ಎಂದು ಅಟ್ಟಿದಳು. ಆಡುಗಳು ಜಿಗಿಯುತ್ತ ಸ್ವಲ್ಪ ದೂರ ತೆರಳುವ ವರೆಗೂ ಅಲ್ಲೇ ನಿಂತುಕೊಂಡಳು. ಅವಳು ಹೊರಳುವಷ್ಟರಲ್ಲಿ "ರೋಹಿಣೀ, ರೋಹಿಣೀ," ಎಂದು ಯಾರೋ ಕರೆದಂತಾಯಿತು. ಅಷ್ಟದಿಕ್ಕುಗಳಿಗೆ ಪ್ರದಕ್ಷಿಣೆ ಬಂದು ನಮಸ್ಕರಿಸುವವರಂತೆ ರೋಹಿಣಿ ಕೈಜೋಡಿಸಿಕೊಂಡು ತಿರುಗಿದಳು. ಯಾರೂ ಕಾಣಿಸಲಿಲ್ಲ. "ರೋಹಿಣೀ, ನಾನು" ಎಂದನ್ನುತ್ತ ಚಂದ್ರಮೋಹನ ಬೇವಿನ ಮರದಿಂದ ಇಳಿಯುತಿದ್ದ. ನೋಡಿದ ರೋಹಿಣಿ ಅಚ್ಚರಿ ಪಟ್ಟಳು. "ಮೆಲ್ಲಗೆ, ಮೆಲ್ಲಗೆ" ಎಂದು ಅವಳು ಕೂಗಿ ಕೊಂಡಳು. ಅವನು ರೆಂಬೆ ಹಿಡಿದು ನೇತಾಡಿ ನೆಲದ ಮೇಲೆ ಜಿಗಿದ. ಹಾರಿದವನು ಎದ್ದು ನಿಲ್ಲಲಿಲ್ಲ. ಅಲ್ಲೇ ಮೊಣಕಾಲುಗಳನ್ನು ತಿಕ್ಕುತ್ತ ಕುಳಿತ. ರೋಹಿಣಿ ಸಮೀಪ ಬಂದು "ಇದೇನು ಹುಚ್ಚು ಹುಡುಗಾಟಿಕೆ?" ಎಂದು ಬಿರುಸಾಗಿ ಕೇಳಿದಳು.

"ಏನು ಹುಚ್ಚು ? ಏನು ಹುಡುಗಾಟಿಕೆ ?"

"ಮಕ್ಕಳಂತೆ ಮರವನ್ನೇರುವುದು ಹುಡುಗಾಟಿಕೆ. ಇಲ್ಲಿ ಬಂದು ನನ್ನನ್ನು ಕಾಡಿಸುವುದು ಹುಚ್ಚುತನ".

"ನಾನೇನು ಕಾಡಿಸಿದೆ ರೋಹಿಣೀ ?"

"ಮತ್ತೇನಿದು ?"

"ಹೇಂ, ಹೇಂ" ಎಂದ ಮೋಹನ.

ರೋಹಿಣಿ ಸ್ವಲ್ಪ ಸಿಟ್ಟಿನಿಂದಲೇ ಕೇಳಿದಳು. "ಹೇಂ, ಹೇಂ ಅಂದರೆ ಏನರ್ಥ ?"

ಅವನೇ ಎದ್ದು ನಿಂತು ನುಡಿದ "ರೋಹಿಣೀ ನನ್ನ ಮೇಲೆ ಸಿಟ್ಟು ಮಾಡಬೇಡ. ನಿನ್ನ ಕಿಡಿಗಣ್ಣಿನಿಂದ ಎದೆಯಲ್ಲಿ ದಳ್ಳುರಿಯನ್ನೆಬ್ಬಿಸಬೇಡ. ಅದು ಒಳಗಿಂದೊಳಗೆ ಈಗಾಗಲೇ ಹೊತ್ತುತ್ತಿದೆ. ಅಲ್ಲೇ ಹೊಗೆಯುತ್ತಿದೆ. ಹಾಗೆಯೇ ಇನ್ನೂ ಸ್ವಲ್ಪ ಕಾಲ ಹೊತ್ತಿ ಮತ್ತಿ ಜೀವವನ್ನು ಮುಕ್ಕಿ ಮುರಿಯಲಿ."

ರೋಹಿಣಿಯ ಮೋರೆ ಇಳಿಯಿತು. ಅವಳು ನೆಲವನ್ನು ಕಾಲಿನ ಬೆರಳುಗಳಿಂದ ತೀಡುತ್ತ ಹೇಳಿದಳು. "ಮೋಹನ್ ನಿಮಗೆ ಏನು ಹೇಳ

ಬೇಕು ಏನು ಹೇಳಬಾರದೆಂದೇ ನನಗೆ ತಿಳಿಯದಾಗಿದೆ. ಹುಚ್ಚು ಹುಡುಗಾಟಿಕೆ ಎಂದು ನಾನಂದುದು ತಪ್ಪೆ? ಮನೆಯ ಮುಂದಿನ ಮರದಲ್ಲಿ ಕುಳಿತಿದ್ದೀರೀ. ನನ್ನ ಹೆಸರು ಹಿಡಿದು ಕರೆಯುತ್ತಿದ್ದೀರಿ ಯಾರಾದರೂ ಕೇಳಿದರೆ ಏನು ತಿಳಿದುಕೊಂಡಾರೆಂಬ ಪರಿವೆಯೂ ಇಲ್ಲ ನಿಮಗೆ.ಪುಣ್ಯಕ್ಕೆ ಮನೆಯಲ್ಲಿ ಮಾವಯ್ಯನವರಿಲ್ಲ. ಆದರೆ ಇಂದು ನಾಳೆ ಬಂದಾರು. ಪತ್ರ ಬಂದಿದೆ ಗುತ್ತು ನೀವು ಹೀಗೆ ಮಾಡಬೇಡಿ ಮೋಹನ್. ನಿಮಗೆ ದಮ್ಮಯ್ಯ ಹಾಕುತ್ತೇನೆ. ನಾನು ಈ ಮನೆಯಲ್ಲಿ ಈ ಊರಿನಲ್ಲಿ ಬಾಳಿ ಬದುಕಬೇಕೆಂದು ನೀವು ಅಪೇಕ್ಷಿಸುವುದಿಲ್ಲವೆ ? "

"ಇಲ್ಲ"

"ಇಲ್ಲ" ಎಂಬ ಮಾತು ಕೇಳಿ ರೋಹಿಣಿ ಸ್ತಂಭೀಭೂತಳಾದಳು ಆವನು ಮೊದಲಿನಂತೆಯೇ ಉದಾಸೀನ ಭಾವದಿಂದಲೇ ನಿಂತಿದ್ದ.

"ಏನಂದಿರಿ ?" ಎಂದು ಅವಳು ಬೆರಗಾಗಿ ಕೇಳಿದಳು.

"ಇದ್ದುದನ್ನೇ ಹೇಳಿದೆ".

"ಏನದು ? ನನಗೆ ಸರಿ ಅರ್ಥವಾಗಲಿಲ್ಲ"

"ಬಿಚ್ಚಿ ಹೇಳಬೇಕೇ ರೋಹಿಣೀ?"

"ಹುಂ"

"ನನಗೆ ಹುಚ್ಚು ಹಿಡಿದಿದೆ ಎಂದು ನೀನು ಹೇಳದಿರಲಾರೆ".

"ಈ ಮೊದಲೇ ಹೇಳಿಬಿಟ್ಟಿದ್ದೇನೆ. ಆದುದರಿಂದ ಇನ್ನೊಮ್ಮೆ ನುಡಿದರೆ ಹೊಸತೇನನ್ನೂ ನಾನು ಹೇಳಿದ ಹಾಗಾಗಲಾರದು".

ಮೋಹನ ಪಿಸುಗುಟ್ಟಿದ. "ರೋಹಿಣೀ ನನಗಾಗಿ ನೀನು ಬಳಲುತ್ತಿದ್ದೀ. ನಿನಗಾಗಿ ನಾನು ಬತ್ತಿಹೋಗುತ್ತಿದ್ದೇನೆ. ಹೀಗೆಯೇ ಎಷ್ಟು ದಿನ ನಡೆದೀತು ? ಇದರ ಕೊನೆಯೇನು ? ಈ ವ್ಯಥಾನಲ ಇಬ್ಬರನ್ನೂ ಬೇಗನೇ ದಹಿಸಿಬಿಡುವುದು ನಿಶ್ಚಯ. ಇವರಿಂದ ಏನು ಪುರುಷಾರ್ಥ ? ಯಾರಿಗೂ ಸುಖವಿಲ್ಲ. ಕುಂಬಳಕಾಯಿಯಂತೆ ಒಳಗಿಂದೊಳಗೆ ಕೊಳೆಯುವುದೊಂದೇ ಗತಿ. ಯಾವ ಭವಿಷ್ಯವೂ ಇಲ್ಲ. ಈ ಬಂಧನದಾಚೆ ತೆರಳಲು ಶಕ್ಯವಿಲ್ಲವೇ ರೋಹಿಣೀ ?"

"ಎಂದರೆ ?"

" ಆಚೆ ಬಂಧನದಾಚೆ. ಬಹಳದೂರ. ಇಬ್ಬರೂ ತೆರಳೋಣ. ಯಾರಿಗೂ ಹೇಳೋಣ ಬ್ಯಾಡ. ಯಾರಿಗೂ ಗೊತ್ತಾಗುವುದಿಲ್ಲ. ಜಗತ್ತು ಬಹಳ ವಿಶಾಲವಾಗಿದೆ. ಯಾರೂ ಇಲ್ಲಿಯವರು ಕಾಣದ, ಕೇಳದ, ಬಾರದ ಊರೂರುಗಳಿವೆ. "

ರೋಹಿಣಿ ಶಿಲಾಬಾಲಿಕೆಯಂತೆ ನಿಂತು ಬಿಟ್ಟಳು. ಶಿಲಾಬಾಲಿಕೆಗೂ ರೋಹಿಣಿಗೂ ಇಷ್ಟೇ ವ್ಯತ್ಯಾಸ. ಕಲ್ಲಿನಿಂದ ಕೆತ್ತಿದ್ದ ಆ ವಿಗ್ರಹದಲ್ಲಿ ಕಣ್ಣೀರು ಸುರಿಯುವುದಿಲ್ಲ. ರೋಹಿಣಿಯ ಕಣ್ಣುಗಳಿಂದ ಮಾತ್ರ ನೀರು ಇಳಿಯುತಿತ್ತು. " ನಿಮ್ಮ ಹತ್ತಿರ ಎಷ್ಟು ಹಣವಿದೆ ಮೋಹನ್? " ಎಂದು ಅವಳು ಪ್ರಶ್ನಿಸಿದಳು.

" ಹಣವೇಕೆ ರೋಹಿಣಿ ? "

" ಎಂದರೆ ಗಾಳಿಯಲ್ಲಿ ತೇಲಿ ಹೋಗಬೇಕೇ "

" ದಾರಿ ವೆಚ್ಚಕ್ಕೆ ನಾನು ಏನಾದರೂ ಮಾಡುತ್ತೇನೆ "

" ಮತ್ತೆ ? "

" ಮತ್ತೆ? ಏನಾದರೊಂದಾಗುತ್ತದೆ. ನಾನು ಎಲ್ಲಾದರೂ ಕೆಲಸಕ್ಕೆ ಸೇರಿಕೊಳ್ಳುತ್ತೇನೆ. ಅದೆಲ್ಲ ಯೋಚನೆ ನಿನಗೇಕೆ? ನೀನು ಸಿದ್ಧಳಿದ್ದೀಯಾ ಹೇಳು? "

ರೋಹಿಣಿ ಎಳ್ಳಷ್ಟು ವಿಕಾರವಶಳಾಗದೆ ಹೇಳಿದಳು. " ಸಿದ್ಧಳಿದ್ದೇನೆ ಮೋಹನ್. ಈ ಮನೆ, ಊರು ಬಿಟ್ಟು ಹೋಗಲು ಸಿದ್ಧಳಾಗಿದ್ದೇನೆ. ಬಂಧನದಾಚೆ ಸಾಗಲು ಸದಾ ಸಿದ್ಧಳಾಗಿದ್ದೇನೆ. ಹೊರಡುವ ದಿನವನ್ನು ನಾನು ನಿಮಗೆ ನಿಶ್ಚಯವಾಗಿಯೂ ತಿಳಿಸುತ್ತೇನೆ. ನೀವು ಈಗಿಂದೀಗಲೇ ಅವಸರಪಡಬೇಡಿ. ಈ ಕಿವಿಗಳು ಕೇಳಬೇಕಾದ ಮಾತುಗಳು ಇನ್ನೂ ಇವೆ. ನೋಡಬೇಕಾದುದನ್ನೆಲ್ಲ ಕಣ್ಣುಗಳು ನೋಡಿಲ್ಲ. ಜೀವಕ್ಕೆ ಸಂಕಟಗಳು ಸಾಕಾಗಿಲ್ಲ ಎಲ್ಲ ಮುಗಿಸಿಕೊಂಡು ಹೊರಡಬೇಕು. ಎಲ್ಲ ಋಣಾನುಬಂಧಗಳು ಕಡಿಯಬೇಕು. ಇಲ್ಲದಿದ್ದರೆ ಶೇಷ ಉಳಿಯುತ್ತದೆ. ಮನಸ್ಸನ್ನು ಇತ್ತ ಎಳೆದೀತು. ಹೋದಮೇಲೆ ಮತ್ತೆ ಈಚೆ ತಲೆಹಾಕಬಾರದು. ಮೋಹನ್ ಹೋದ ಮೇಲೆ ಹೋದ ಹಾಗೆಯೇ ಆಗಬೇಕು. "

ಮೋಹನನ ಉತ್ತರವನ್ನು ನಿರೀಕ್ಷಿಸದೆ ಅವಳು ತಿರುಗಿ ದಡದಡನೆ

ನಡೆದು ಬಂದು ಗೇಟಿನ ಬಾಗಿಲನ್ನು ಹಾಕಿಕೊಂಡಳು. ಒಮ್ಮೆಯೂ ಅವನ ಕಡೆ ಕಣ್ಣೆತ್ತಿ ನೋಡಲಿಲ್ಲ.

## ಒಂಬತ್ತನೆಯ ಅಧ್ಯಾಯ

ಮರುದಿನ ಸಾಯಂಕಾಲ ರೋಹಿಣಿ ಸಾಧನಕೇರಿಗೆ ಹೊರಟು ಹೋದಳು. ಚಂದ್ರಮೋಹನನ್ನು ಕಾಣುವುದೇ ಅವಳ ಉದ್ದೇಶ. ಅವನೊಡನೆ ಹೃದಯ ಬಿಚ್ಚಿ ನಾಲ್ಕು ಮಾತುಗಳನ್ನಾಡಲು ಅವಳ ಆತುರ ಮಾತನಾಡಲೇಬೇಕೆಂದು ಅವಳಿಗೆ ಅನಿಸಹತ್ತಿದೆ. ಏಕೆಂದರೆ, ಚಂದ್ರಮೋಹನನ ನಡೆನುಡಿಯಿಂದ ಅವಳಿಗೆ ತುಂಬಾ ಕಳವಳವಾಗಿದೆ. ಅದರಿಂದ ತನಗೆ ಕಷ್ಟಪರಂಪರೆಗಳು ಒದಗಬಹುದೆಂಬ ಭೀತಿಯಲ್ಲ. ಅವು ಬಂದಾಗ ಬಂದಂತೆ ರೋಹಿಣಿ ನೋಡಿಕೊಂಡಾಳು ! ಚಂದ್ರಮೋಹನನ ಸ್ಥಿತಿಗತಿಗಳ ಬಗ್ಗೆ ಅವಳ ವಿವಂಚನೆ. ಅವನ ಅವಸ್ಥೆಯನ್ನು ಕಂಡು ಅವಳ ತಳಮಳ ಮೋಹನ ದುಃಖಿ. ಆವನ ದುಃಖಕ್ಕೆ ತಾನೇ ಮೂಲ. ಪ್ರೇಮದ ಹುಳ ಅವನ ಹೃದಯವನ್ನು ಕೊರೆದಿದೆ. ದೊಡ್ಡ ಗಾಯವಾಗಿದೆ. ಮತ್ತು ಅದರಿಂದ ರಕುತವೂ ಸೋರುತ್ತಿದೆ. ಗಾಯ ಒಮ್ಮೆಲೇ ಗುಣವಾಗಲಾರದು. ಗುಣಪಡಿಸಲೂ ಅಸಾಧ್ಯ. ಆದರೆ ನೋವಿನಿಂದ ನರಳುತ್ತಿರುವವರಿಗೆ ಮೋರೆ ತೋರಿಸಿಬಂದರೆ ಎಷ್ಟೋ ಸಮಾಧಾನ. ಕುಳಿತು ನಾಲ್ಕು ಮಾತುಗಳನ್ನಾಡಿದರೆ ಅವರಿಗೆ ಸಂತೋಷವಾಗುತ್ತದೆ. ಆ ಕ್ಷಣದಲ್ಲಾದರೂ ನೋವು, ದುಃಖ ಸ್ವಲ್ಪ ಮರೆಯಾಗುತ್ತದೆ. ತಮ್ಮಷ್ಟಕ್ಕೆ ಅವರನ್ನು ಬಿಟ್ಟು ಬಿಟ್ಟರೆ ಅವರ ತಲೆಯೊಳಗೆ ಹಿಂದಿನ ಮುಂದಿನ ಅನಂತ ಕಷ್ಟಗಳು ಬಂದು ಪೀಡಿಸುವವು. ರೋಗ ಗುಣವಾಗುವುದರ ಬದಲು ಹೆಚ್ಚಾಗುತ್ತದೆ. ಗಾಯದ ಕೀವಿನ ದುರ್ಗಂಧ ಅವರ ಮಾತಿನಲ್ಲೂ ನಡತೆಯಲ್ಲೂ ಕಾಣಿಸಿಕೊಳ್ಳುವುದು ಅಸಹನೆಯಿಂದ ಅವರು ಒದರಾಡುವರು. ಮೋಹನ ಹಿಂದಿನ ದಿನ ಓಡಿ ಹೋಗುವ ವಿಚಾರವನ್ನರುಹಿದುದೂ ಆ ದುಃಖಾತಿಶಯದಿಂದಲೇ. ಅವನ ತಲೆಯಲ್ಲಿ ಅಂತಹ ದುರ್ವಿಚಾರಗಳು ಸುಳಿಯತೊಡಗಿದುದನ್ನು ಕಂಡು ಅವ

ಳಿಗೇ ನಡುಕ ಹುಟ್ಟಿದೆ. ಸುಳಿಗಳು ಅವನನ್ನು ಎಲ್ಲಿಯ ವರೆಗೆ ಎಳೆದೊಯ್ಯುವವೋ! ರೋಹಿಣಿ ತುಂಬಾ ವಿಹ್ವಲಳಾಗಿದ್ದಾಳೆ. ಒಂದು ಹಗ್ಗವನ್ನೆಸೆಯಬೇಕು. ಕೈಗೆ ನಿಲುಕಿದರೆ ಕೈಕೊಟ್ಟು ದಡಕ್ಕೆ ಎಳೆದು ಹಾಕಬೇಕು ಎಂಬ ವಿಚಾರದಿಂದ ರೋಹಿಣಿ ಸಾಧನಕೇರಿಗೆ ಹೊರಟು ಬಂದಿದ್ದಾಳೆ.

ಆದರೆ, ಬಂದಕೂಡಲೇ ಅವಳು ಚಂದ್ರಮೋಹನನ ಮನೆಗೆ ತೆರಳಲಿಲ್ಲ. ಮತ್ತೆ ಹಾಗೆ ತೆರಳುತ್ತಿದ್ದರೆ "ಯಾಕೆ? ಏನು?" ಎಂದು ನಾಲ್ಕು ನಾಲಿಗೆಗಳೂ ತಿರುಗುತ್ತಿದ್ದುವು. ಅದನ್ನು ರೋಹಿಣಿ ಊಹಿಸಲಾರದವಳಲ್ಲ. ಆದುದರಿಂದ ಮೊದಲು ನೆಟ್ಟಗೆ ತನ್ನ ತವರುಮನೆಯ ಮುಂದೆಯೇ ಟಾಂಗಾದಿಂದ ಇಳಿದಳು. "ಸಹಜ ಬಂದೆ. ಪೇಟೆಗೆ ತೆರಳುತ್ತಿದ್ದವಳು. ಬೇರೇನು ಕೆಲಸವಿದೆ ನನಗೆ?" ಎಂದು ಹೇಳಿ ಅವರೆಲ್ಲರ ಕುತೂಹಲದ ಗುಳ್ಳೆಯನ್ನು ಚುಚ್ಚಿದಳು. ಯಾವ ಮನೋವಿಕಾರವೂ ಇಲ್ಲದೆ ಸರಸ ಸಲ್ಲಾಪವನ್ನಾಡಿದಳು. ಮಾವಯ್ಯನವರ ಮಾತುಗಳನ್ನು ಹೇಳಿ ನಗಿಸಿದಳು. "ಧಾರವಾಡಕ್ಕೆ ಯಜಮಾನರಿಗೆ ವರ್ಗವಾಗುವ ಸಂಭವವಿದೆ. ಪತ್ರ ಬಂದಿದೆ" ಎಂದು ಹೇಳಿ ಅವರನ್ನು ತಣಿಸಿದಳು. ಅಲ್ಲಿ ಬಹಳ ಹೊತ್ತಿನ ವರೆಗೆ ಇದ್ದು ಆ ಮೇಲೆ ಆಚೀಚೆಯ ಗುರುತು ಪರಿಚಯವುಳ್ಳ ಮನೆಗಳಿಗೆ ತೆರಳಿ ಹೆಣ್ಣುಮಕ್ಕಳನ್ನು ಕಂಡಳು. ಅವರೊಡನೆ ಕೆಲವು ನಿಮಿಷಗಳ ವರೆಗಿದ್ದು ಸಂಸಾರದ ಆಗು ಹೋಗುಗಳನ್ನು ಮಾತನಾಡಿದಳು. ಮಕ್ಕಳನ್ನು ಎತ್ತಿಕೊಂಡು ಅವನ್ನು ಮುದ್ದಿಸಿದಳು. ಹೊರಟು ಬರುವಾಗ ಶಿಶುಗಳ ಕೈಯಲ್ಲಿ ಒಂದೊಂದು ರೂಪಾಯಿಯ ನಾಣ್ಯವನ್ನು ಇಟ್ಟು ಬಂದಳು. ಹಾಗೆಯೇ ಕೊನೆಗೆ ಚಂದ್ರಮೋಹನನ ಅಣ್ಣನ ಮನೆಗೂ ಪ್ರವೇಶಿಸಿದಳು.

ಮೋಹನನ ಅತ್ತಿಗೆ ಆದರದಿಂದ ರೋಹಿಣಿಯನ್ನು ಬರಮಾಡಿಕೊಂಡರು. ಚಹಾಕ್ಕೆ ಸಿದ್ಧತೆ ನಡೆಸಿದರು. "ಬೇಡ, ಬೇಡ" ಎಂದು ರೋಹಿಣಿ ಎಷ್ಟು ಹೇಳಿಕೊಂಡರೂ ಕೇಳಲಿಲ್ಲ. "ನೀನು ನಮ್ಮ ಮನೆಗೆ ಬರುವುದೇ ಅಪರೂಪ. ಬಡವರ ಮನೆಗೆ ಭಾಗೀರಥಿ ಬಂದಿದ್ದೀ. ಅಷ್ಟು ಪ್ರೀತಿ ತೋರಿಸಿದುದೇ ನಮಗೆ ಮಹದಾನಂದ" ಎಂದು ಆ ತಾಯಿ

ಉಪಚರಿಸಿದರು.

“ಪ್ರೀತಿ ಇದ್ದರೆ ಸಾಕು. ಚಹಾ ಕೊಟ್ಟರೆ ಕುಡಿದರೆ ಮಾತ್ರ ಪ್ರೀತಿಯೇನು” ಎಂದು ಕೇಳಿದಳು ರೋಹಿಣಿ.

“ಹಾಗಿಲ್ಲ ನಮ್ಮವ್ವ. ಕುಚೇಲ ಕೃಷ್ಣನಿದ್ದಲ್ಲಿ ತೆರಳಿದಾಗ ಅವಲಕ್ಕಿ ಕಟ್ಟಿಕೊಂಡನಂತೆ. ದ್ವಾರಕೆಯಲ್ಲಿ ಅವಲಕ್ಕಿ ಇದ್ದಿಲ್ಲವೇನು? ಪರಮಾತ್ಮನಿಗೆ ಅವಲಕ್ಕಿಗೂ ಬರಗಾಲವಿದ್ದಿತ್ತೇ? ಪ್ರೀತಿಯಿಂದ ಕುಚೇಲ ಅವಲಕ್ಕಿ ಹಿಡಿದುಕೊಂಡ. ಅಷ್ಟೆ. ಹಾಗೆ ನಾನಾದರೂ ಒಂದಿಷ್ಟು ಚಹಾ ಮಾಡುತಿದ್ದೇನೆ” ಎಂದರು. ಅವರು ಸ್ವಲ್ಪ ಹಳೇ ಪದ್ಧತಿ ಹೆಂಗಸು. ಮಡಿ ಮೈಲಿಗೆ ಆಚಾರ ಎಲ್ಲ ಬಹಳ. ಆದುದರಿಂದ ರೋಹಿಣಿ ವಾದಿಸಲಿಕ್ಕೆ ಹೋಗಲಿಲ್ಲ. ಅವರು ಹೇಳಿದುದಕ್ಕೆ “ಹೂಂ, ಹೂಂ” ಎಂದು ತಲೆ ಅಲ್ಲಾಡಿಸಿದಳು. ಮತ್ತು ಅವರಿಗೆ ತುಂಬಾ ಮಾತನಾಡಲು ಆಶೆ. ಅರೆಕ್ಷಣದಲ್ಲಿ ಅರ್ಧ ರಾಜ್ಯ ನುಂಗುವ ಆತುರ. ಬಿಸಿನೀರಿಗೆ ಚಹಾಪುಡಿ ಸುರಿಯುತ್ತ ಅವರು ಹೇಳಿದರು.

“ನೋಡಿದಿಯೇನವ್ವಾ, ಚಹಾ ಮಾಡದೇ ಇರುತ್ತಿದ್ದರೆ ನೀನು ನಮ್ಮನೆಯಲ್ಲಿ ಇಷ್ಟು ಹೊತ್ತು ಉಳಿಯುತಿದ್ದೀಯಾ? ಬರುತಿದ್ದೀ. ಹೋಗುತಿದ್ದೀ. ನಾನು ಚಹಾದ ಒತ್ತಾಯ ಮಾಡಿದುದರಿಂದ ಕುಳಿತಿ. ಚಹಾ ಆಗಲು ಸ್ವಲ್ಪ ಹೊತ್ತು ಹಿಡಿಯುತ್ತದೆ. ಅಂದರೆ ನಾವಿಬ್ಬರೂ ಅಷ್ಟು ಹೊತ್ತಿನವರೆಗೆ ಮಾತನಾಡಬಹುದಲ್ಲ ನೋಡು. ನನ್ನ ಜೀವಕ್ಕೆ ಬೇಸರವಾಗಿದೆ ನೋಡವ್ವ. ಬಡತನ, ಕಷ್ಟ ಇವೆಲ್ಲ ನಾನು ಹೇಳುವುದಿಲ್ಲ. ಬಂದಾಗ ನಾವು ತಂದಿಲ್ಲ. ಹೋಗುವಾಗ ಒಯ್ಯುವವರೂ ಇಲ್ಲ. ಎಲ್ಲ “ಚಾರ್‌ದಿನಕಾ ಖೇಲ್”. ಮಕ್ಕಳ ಉಪಟಳವೂ ನನಗೆ ಹೊಸದಲ್ಲ. ಎಲ್ಲಕ್ಕಿಂತ ಈಗ ನಮ್ಮ ಮೋಹನನ ಸ್ಥಿತಿಯೇ ದೊಡ್ಡ ಚಿಂತೆಗೆ ಕಾರಣವಾಗಿದೆ ನೋಡವ್ವ”.

ಏನು ಹೇಳುತ್ತಾರೋ ಎಂದು ರೋಹಿಣಿ ಅಂಜಿದಳು. ಅಜಾಗರೂಕತೆಯಿಂದ ತನ್ನ ಬಾಯಿ ಯಾವ ಮಾತುಗಳನ್ನಾದರೂ ಆಡಕೂಡದೆಂದು ತುಟಿಗಳನ್ನು ಒಳಗೆ ಸೆಳೆದುಕೊಂಡಳು. ಅವರೇ ಚಹಾದ ನೀರನ್ನು ಸೋಸುತ್ತ ಮಾತು ಮುಂದುವರಿಸಿದರು.

“ಪರೀಕ್ಷೆಯಲ್ಲಿ ಫೇಲಾದ ಮೇಲೆ ತುಂಬಾ ಬದಲಾಗಿ ಬಿಟ್ಟಿದ್ದಾನೆ.

ಇತ್ತೀಚೆಗಂತೂ ಹುಚ್ಚರ ಗತಿ. ಹೊತ್ತಿಗೆ ಸರಿಯಾಗಿ ಮನೆಗೆ ಊಟಕ್ಕೂ ಬರುವುದಿಲ್ಲ. ಎಲ್ಲಿ ಊಟಮಾಡುತ್ತಾನೋ ? ಮಾಡುವುದೇ ಇಲ್ಲವೋ ? ಒಂದೊಂದು ದಿನ ಹೊತ್ತಲ್ಲದ ಹೊತ್ತಿನಲ್ಲಿ ಬಂದು, "ಚಪಾತಿ, ರೊಟ್ಟಿ ಏನಾದರೂ ಉಳಿದಿವೆಯೇನು ? '' ಎಂದು ಮಕ್ಕಳ ಕೂಡೆ ಕೇಳುತ್ತಾನೆ. "ಇಲ್ಲ; ಮಾಡಿಕೊಡಲೇ ? '' ಎಂದರೆ, " ಬೇಡ ಬೇಡ ಊಟವಾಗಿದೆ. ಇದು ಕಳ್ಳಹಸಿವು. ಸುಮ್ಮಗೆ ಕೇಳಿದೆ " ಎಂದನ್ನುತ್ತಾನೆ. ಇದ್ದ ದಿನ ಕೊಟ್ಟರೆ ಅದನ್ನೇ ಜಗಿದುಬಿಡುತ್ತಾನೆ. ಮತ್ತೆ ಅರೆಕ್ಷಣ ಮನೆಯೊಳಗಿಲ್ಲ. ಎಲ್ಲಿಗೆ ತೆರಳುತ್ತಾನೋ ? ಏನುಮಾಡುತ್ತಾನೋ ? ನನಗೊಂದೂ ಅರ್ಥ ವಾಗುವುದಿಲ್ಲ. ರಾತ್ರಿ ಮಲಗಿಕೊಳ್ಳಲೂ ಒಂದೊಂದುದಿನ ಮನೆಗೆ ಬರು ವುದಿಲ್ಲ ಮುಂಜಾನೆ ಬಂದಾಗ ಅಬ್ಬ ಅವನನ್ನು ನೋಡುವುದೇ ಬೇಡ. ಬಂದು ಹಾಸಿಗೆ ಹಾಸಿ ಮಲಗಿ ಬಿಡುವ. ಮಾತನಾಡಿಸುವುದೇ ಕಷ್ಟ. ಅವರಂತೂ ಮನೆಯಲ್ಲೇಇಲ್ಲ. ಮುಂಜಾನೆ ಅಂಗಡಿಗೆ ತೆರಳಿದರೆ ಬರು ವುದು ರಾತ್ರಿಗೇ. ನಾನಿದ್ದೇನೆ ಒಂದು ಗೂಬೆ. ಆವರೆ ನನ್ನ ಮಾತನ್ನು ಕಿವಿಯಲ್ಲಿ ಹಾಕಿಕೊಳ್ಳುವುದಿಲ್ಲ.''

ಚಹಾದ ತಾಟನ್ನು ಅವರು ರೋಹಿಣಿಯ ಮುಂದೆ ಇರಿಸಿ ನುಡಿದರು. ನೀನಾದರೂ ಒಂದು ಮಾತು ಹೇಳವ್ವಾ".

ರೋಹಿಣಿ ಬೆಚ್ಚಿಬಿದ್ದು, "ನನ್ನ ಮಾತನ್ನು ಕೇಳುತ್ತಾರೇನ್ರೀ ? " ಎಂದು ಕೇಳಿದಳು.

" ಕೇಳಿದರೆ ಕೇಳಿದ. ಇಲ್ಲದಿದ್ದರೆ ಇಲ್ಲ. ನಿನಗೆ ಅವನ ಪರಿಚಯು ವಿದೆ. ಅಭಿಮಾನದಿಂದ ನಿನ್ನ ವಿಷಯ ಮೊದಲು ಮಾತನಾಡುತ್ತಿದ್ದ. ಅದಕ್ಕಾಗಿ ಹೇಳಿದೆ. ''

"ಮನೆಯಲ್ಲಿ ಇದ್ದಾರೇನು " ರೋಹಿಣಿ ಕೇಳಿದಳು.

" ಈಗ ಬರಬಹುದು ''

ರೋಹಿಣಿ ಚಹಾ ಕುಡಿದು ಸ್ವಲ್ಪ ಹೊತ್ತಿನ ವರೆಗೆ ಮೋಹನನ ಆಗ ಮನವನ್ನೇ ನಿರೀಕ್ಷಿಸಿ ಕುಳಿತಳು. ಕೊನೆಗೆ ಬೇಸತ್ತು ಮನೆಗೆ ಹೊರಟಳು. ಸಾಧನಕೇರಿಯಿಂದ ಸ್ವಲ್ಪ ದೂರಬಂದಾಗ ಮೋಹನ ಇದಿರಾದ. ''ನಾನು ನಿಮ್ಮ ಮನೆಗೆ ತೆರಳಿದ್ದೆ'' ಎಂದು ಅವಳು ಸೂಚಿಸಿದಳು.

" ನಿಜವಾಗಿ ? "

" ಹುಂ. ನಿಜ ".

" ಯಾಕೆ ? "

" ನಿನ್ನೆ ನೀವು ಕೇಳಿದ್ದ ಪ್ರಶ್ನೆಗೆ ಉತ್ತರ ಕೊಡಲು ಬಂದೆ."

ಮೋಹನ ಏನೋ ಸ್ಮರಿಸಿಕೊಳ್ಳುವವನಂತೆ " ನಾನು ಏನು ಹೇಳಿದ್ದೆ ?" ಎಂದು ಕೇಳಿದ.

ಅವನ ಆ ಪ್ರಶ್ನೆಯಿಂದ ರೋಹಿಣಿಗೇ ತುಸು ಆಶ್ಚರ್ಯವಾಯಿತು. ಅವಳೇ ನೆನಪು ಹುಟ್ಟಿಸಿದಳು. " ಎಲ್ಲಾದರೂ ಹೋಗೋಣ ಎಂದು ನಿನ್ನೆ ನೀವು ತಿಳಿಸಿದ್ದಿರಲ್ಲ. ಅದಕ್ಕಾಗಿ ಹೇಳೋಣ ಎಂದು ಬಂದೆ".

" ಓ ಹೋ ಹೋ. ಈಗ ಈಗ ನೆನಪಾಯಿತು. ಏನು ಹೇಳಲು ಬಂದೆ ನೀನು ? "

" ಹೇಳಲು ಬಹಳವಿದೆ. ಕೇಳುತ್ತೀರಾ ? "

"ನನ್ನ ಬುದ್ಧಿಮಂಕಾಗಿದೆಯೆಂದು ನೀನು ತಿಳಿದುಕೊಂಡಂತೆ ಕಿವಿಗೂ ಕೇಡು ಬಂತೆಂದು ಭಾವಿಸಿದೆಯಾ ? "

ಅವನ ಮಾತು ರೋಹಿಣಿಯ ಎದೆಗೆ ಕಣೆಯಂತೆ ನಟ್ಟಿತು. ಅದರಿಂದ ಕರುಣಾ ರಸ ಚಿಮ್ಮಿತು. ಅವಳು ಮೃದು ವಚನದಿಂದಲೇ ಮಾತನಾಡಿದಳು " ಮೋಹನ್, ನೀವು ದೊಡ್ಡವರಾದಮೇಲೆ ನನ್ನನ್ನು ಬಿಟ್ಟು ಬೇರೆ ಯಾವ ಹುಡುಗಿಯನ್ನೂ ನೋಡಿಲ್ಲವೇ ? "

ಮೋಹನನ ಮೋರೆ ಸ್ವಲ್ಪ ಉಗ್ರವಾಯ್ತು. " ಬಹಳ ಹುಡುಗಿಯರನ್ನು ನೋಡಿದ್ದೇನೆ ರೋಹಿಣೀ. ಇಕೋ, ಈ ರಸ್ತೆಯಲ್ಲಿ ಅರ್ಧ ತಾಸಿನವರೆಗೆ ನಿಲ್ಲು. ಅನೇಕರನ್ನು ನೋಡ ಬಹುದು. ದೇವರು ಕಣ್ಣುಗಳನ್ನು ಕೊಟ್ಟಿರುವುದರಿಂದ ನಾನಾದರೂ ನೋಡಿದ್ದೇನೆ. ನೋಡುತಿದ್ದೇನೆ " ಎಂದು ಸುರಿದ.

" ಒಳ್ಳೇದು. ನೀವು ನೋಡಿದ ಹುಡುಗಿಯರಲ್ಲೆಲ್ಲ ನಾನೇ ರೂಪವಂತೆಯೇನು ? ನಾನು ಸುರಸುಂದರಿಯಲ್ಲ. ನನಗಿಂತ ಮಿಗಿಲಾದ ನೂರಾರು ಸ್ತ್ರೀಯರನ್ನು ನಾನೇ ನೋಡಿದ್ದೇನೆ. ಕನ್ನಡಿಯ ಮುಂದೆ ನಿಂತುಕೊಂಡರೆ ಒಮ್ಮೊಮ್ಮೆ ನನ್ನ ರೂಪವನ್ನೇ ನೋಡಿ ನನಗೆ ಬೇಸರ

ವಾಗುತ್ತಿದೆ. ಉಬ್ಬಿದ ಕೆನ್ನೆಗಳು. ದೊಡ್ಡ ಹಲ್ಲುಗಳು. ದೊಡ್ಡ ತುಟಿಗಳು. ಎಲ್ಲ ವಿಲಕ್ಷಣ. ಸೌಂದರ್ಯ ನನಗೆ ಮಾರಿಹೋಗಿಲ್ಲ. ರೂಪದಲ್ಲಿ ಗುಣದಲ್ಲಿ ನನಗಿಂತ ನೂರ್ಮಡಿ ಮೇಲಾದ ಹೆಣ್ಮಕ್ಕಳಿದ್ದಾರೆ ಮೋಹನ್."

ಮೋಹನ ಕಠೋರತನದಿಂದ ಹೇಳಿದ. "ಇದ್ದಾರೆ ರೋಹಿಣೀ, ನೀನು ಹೇಳಿದುದು ನಿಜ. ಗುಣದ ವಿಷಯದಲ್ಲಿ ನಾನು ಹೇಳಲಾರೆ. ಏಕೆಂದರೆ ಪರಸ್ಪರ ಹೊಕ್ಕು ಬಳಕೆಯಿಂದ ಒಬ್ಬರ ಗುಣ ಮತ್ತೊಬ್ಬರಿಗೆ ಗೊತ್ತಾಗುತ್ತದೆ. ಪರರು ಆಡುವ ಮಾತಿನಲ್ಲಿ ಹುರುಳಿರುವುದಿಲ್ಲ. ಆದರೆ ರೂಪದ ಮಟ್ಟಿಗೆ ನನಗೆ ಗೊತ್ತಿದೆ ಎಷ್ಟೋ ವೇಶ್ಯೆಯರೂ ನಿನಗಿಂತ ರೂಪವಂತೆಯರಾಗಿದ್ದಾರೆ"

ರೋಹಿಣಿ ಸಿಟ್ಟಿನಿಂದ ಕೇಳಿದಳು 'ಮೋಹನ್, ಏನು ಮಾತಿದು?"

"ನೀನೇನು ಮಾತನಾಡುತಿದ್ದೀ?'' ಎಂದು ಅವನು ಬಿರುಸಾಗಿಯೇ ಕೇಳಿ ಮತ್ತಿಂತೆಂದ. "ಏಕೆ, ನನ್ನ ಮುಂದೆ ಬೇರೆ ಹುಡುಗಿಯರ ರೂಪ ಗುಣಗಳನ್ನು ವರ್ಣಿಸಲಾರಂಭಿಸಿದ್ದೀಯಲ್ಲ! ರಹಸ್ಯವಿಟ್ಟುಕೊಳ್ಳದೆ ಎಲ್ಲ ಹೇಳಿಬಿಡು. ಎಲ್ಲಾದರೂ ನನಗೊಂದು ರಂಭೆಯನ್ನು ಗೊತ್ತು ಮಾಡಿದ್ದೀಯಾ ? ಹಾಗಿದ್ದರೆ ಲಗ್ನದ ದಿನ ನಿಶ್ಚಯಿಸಿ ಬಿಡು. ನನ್ನನ್ನು ಕೇಳಬೇಕಾಗಿಲ್ಲ. ನನಗೆ ಹಿಂದಿಲ್ಲ ಮುಂದಿಲ್ಲ. ಎಲ್ಲ ನೀನೇ. ನೀನೇ ಮದುವೆ ಮಾಡಿಸಿ ಬಿಡು. ಬಹಳ ಪುಣ್ಯ ಬರುತ್ತದೆ ನಿನಗೆ ರೋಹಿಣೀ. ಆದರೆ ವರದಕ್ಷಿಣೆ ತೆಗೆದು ಕೊಳ್ಳದೆ ಮಾತ್ರ ಬಿಡಬೇಡ. ಒಂದೆರಡು ಸಾವಿರದಿಂದ ನನಗೆ ತೃಪ್ತಿಯಾಗಲಿಕ್ಕಿಲ್ಲ. ಆ ಹಣದ ಬಲದಿಂದ ಮತ್ತೆ ಕಾಲೇಜಿಗೆ ತೆರಳಬೇಕೆಂದಾಸೆ ನನಗೆ. ಲಂಡನಿಗೆ ತೆರಳಲು ಮತ್ತೂ ಲವಲವಿಕೆ. ಆಗಲಿ. ನಿನ್ನ ಇಷ್ಟ ವಿದ್ದಂತಾಗಲಿ".

ಅವನ ಈ ವ್ಯಂಗೋಕ್ತಿಗಳನ್ನು ಕೇಳಿ ಅವಳ ಮುಖಕಮಲ ಬಾಡಿತು ಸ್ವಲ್ಪ ದೂರ ನಡೆಯುವವರೆಗೆ ಅವಳು ತಲೆಯನ್ನೂ ಎತ್ತಲಿಲ್ಲ. ಮಾತುಗಳೂ ಹೊರಡಲಿಲ್ಲ. ಅವಳ ಕಣ್ಣುಗಳಿಂದ ಕೆಲವು ಹನಿಗಳು ಧೂಳಿನ ನೆಲದ ಮೇಲೆ ಉದುರಿ ಅವಳ ಹೃದಯದ ಬೇಗುದಿಯನ್ನು ಬರೆದುವು. ಮೋಹನ ನೊಂದ ಧ್ವನಿ ತೆಗೆದ. "ರೋಹಿಣೀ, ನಿನ್ನ ಕಣ್ಣುಗಳಲ್ಲಿ ಎಷ್ಟು ನೀರಿದೆ ಹೇಳು. ಆಗಾಗ ಒಂದೊಂದೇ ಹನಿಗಳನ್ನು ಸುರಿಸು

ವುದರಿಂದ ನನ್ನ ಹೃದಯುದಲ್ಲಿ ಹೊತ್ತಿಕೊಂಡ ಬೆಂಕಿ ನಂದಿ ಹೋಗಲಾರದು. ಬಿಸಿ ತುಪ್ಪದ ಹನಿಗಳು ಬಿದ್ದಂತಾಗಿ ಪುನಃ ಭಗ್ಗನೆ ಜ್ವಾಲೆಗಳೇಳುತ್ತವೆ. ಹೀಗೆ ಮಾಡಬೇಡ. ಒಮ್ಮೆಯೇ ಅತ್ತು ಬಿಡು. ಅಣೆಕಟ್ಟು ಒಡೆದಂತೆ ನಿನ್ನ ಕಣ್ಣೀರಿನ ಕಟ್ಟೆ ಒಡೆಯಲಿ. ನೆರೆಯ ನೀರಿನಂತೆ ಭೋರ್ಗರೆದು ನೀರು ಧುಮುಕಿ ಹರಿಯಲಿ. ಅದು ನನ್ನನ್ನು ಕೊಚ್ಚಿಕೊಂಡು ಹೋಗಲಿ. ಅಥವಾ ಅದರಲ್ಲಿ ನಾನು ಮುಳುಗಿ ಬಿಡುತ್ತೇನೆ. ಮುಗಿದು ಹೋಗಲಿ. ನನ್ನ ಕಥೆಯ ಕೊನೆಯ ಪುಟಗಳನ್ನು ಮುಗಿಸಿ ಬಿಡೋಣ."

ರೋಹಿಣಿ ರೋದಿಸ ತೊಡಗಿದಳು. ನಡೆಯಲು ಕಾಲುಗಳ ಬಲವೇ ಇಂಗಿ ಹೋಯಿತ್ತು. ರಸ್ತೆಯಲ್ಲಿ ಇದಿರಿಗೆ ಬರುತಿದ್ದ ಒಂದು ಟಾಂಗಾಕ್ಕೆ ನಿಲ್ಲುವಂತೆ ಕೈಸನ್ನೆ ಮಾಡಿದಳು. ಅದು ನಿಂತ ಮೇಲೆ ಟಾಂಗಾ ಏರಿ ಕುಳಿತು, "ನಾನೀಗ ಹೋಗುತ್ತೇನೆ" ಎಂದು ನುಡಿದಳು. ರಸ್ತೆಯ ಬದಿಯಲ್ಲಿ ಹುಗಿದ ದೊಡ್ಡ ಮೈಲುಗಲ್ಲಿನಂತೆ ಮೋಹನ ಅಲ್ಲೇ ನಿಂತು ಬಿಟ್ಟ.

ರೋಹಿಣಿ ಮನೆಯ ಸಮೀಪ ಬಂದಾಗ ಗೇಟುಗಳು ತೆರೆದಿದ್ದುವು. ಜಗಲಿಯಲ್ಲಿ ಬಿಳಿ ಕಾಲು ಚೀಲ, ಬೂಟುಗಳನ್ನಿಟ್ಟಿದ್ದರು ತೂಗ ಹಾಕಿದ್ದ ಕೊಡೆಯ ಮಡಿಕೆಗಳು ಗಾಳಿಗೆ ಹಾರಾಡುತಿದ್ದುವು ಮತ್ತು ಅವಳೇ ಬಣ್ಣದ ನೂಲಿನಿಂದ ಬರೆದ "ಪಿ" ಇಂಗ್ಲೀಷ್ ಅಕ್ಷರವೂ ಅವಳ ಕಣ್ಣಿಗೆ ಬಿದ್ದಿತು. ನಾಲ್ಕೇ ಹೆಜ್ಜೆಗಳಲ್ಲಿ ಅಡಿಗೆ ಮನೆಗೆ ಓಡಿ ಬಂದಳು. ಅವಳನ್ನು ಕಂಡೊಡನೆಯೇ ಗಂಗಮ್ಮನವರು "ಉತ್ತಮ ಬಂದಿದ್ದಾನೆ" ಎಂದು ಸುರಿ, "ಸ್ವಲ್ಪ ಸಿಟ್ಟು ಬಂದಂತೆ ತೋರುತ್ತದೆ. ಹೋಗು ಮಾತನಾಡಿಸಿ ಬಾ" ಎಂದು ಕಳಿಸಿದರು.

ರೋಹಿಣಿ ಸಾಧನಕೇರಿಗೆ ಹೊರಟುಹೋದ ಕೂಡಲೇ ಉತ್ತಮ ಸಾತಾರದಿಂದ ಬಂದ. ಅವನಿಗೆ ಧಾರವಾಡಕ್ಕೆ ವರ್ಗವಾಗಿತ್ತು. ಸಾಮಾನುಗಳನ್ನೆಲ್ಲ ಸರಕಿನ ಗಾಡಿಯೊಳಗೆ ಹಾಕಿ ಟ್ರಂಕು ಹಾಸಿಗೆ ಮೊದಲಾದವುಗಳನ್ನು ತನ್ನೊಂದಿಗೆ ತಂದಿದ್ದ. ದೂರದ ಪ್ರಯಾಣ. ಅವನ ದೇಹಕ್ಕೆ ಆಯಾಸವಾಗಿದೆ. ಮನಸ್ಸೂ ಚಂಚಲ. ಅದಕ್ಕೆ ಸುಖವಿಲ್ಲ. ನೂರಾರು ಕಡೆ ಅಲೆಯುತ್ತಿತ್ತು. ಮನೆಗೆ ಬಂದಾಗ ರೋಹಿಣಿಯಿರಲಿಲ್ಲ. ಅದರಿಂದ ಮುಂಗೋಪ ಮೂಗಿನ ತುದಿ ಬಂದು ಸೇರಿತು. ತಂದೆಯುವರು ಮನೆಯಲ್ಲಿ

ರುತ್ತಿದ್ದರೆ ಸುಮ್ಮನಿರುತ್ತಿದ್ದನೇನೋ! ಈಗ ಅವನೇ ಯಜಮಾನ ಆದುದರಿಂದ ಒದರಾಡಲಾರಂಭಿಸಿದ. ಅಟ್ಟದಿಂದ ಕೆಳಗೆ ಕೆಳಗಿನಿಂದ ಅಟ್ಟಕ್ಕೆ ಎರಡು ಮೂರು ಸಲ ಬಡ ಬಡ ಬೂಟು ಹಾಕಿಕೊಂಡೇ ಓಡಾ ಡಿದ. ರೋಹಿಣಿ ತವರು ಮನೆಗೆ ತೆರಳಿದ್ದಾಳೆಂದು ಕೇಳಿ ಅವನೂ ಹೊರಡ ಲನುವಾದ. 'ಈಗ ಬಂದಾಳು. ಬರುತ್ತೇನೆಂದು ಹೇಳಿಯೇ ತೆರಳಿದ್ದಾಳೆ. ಇಷ್ಟು ಸಮೀಪವಿದ್ದರೂ ಅವಳು ಒಂದೆರಡು ಸಲವೂ ಅಲ್ಲಿಗೆ ತೆರಳಿಲ್ಲ. ದೂರದಿಂದ ಬಂದಿದ್ದೀ. ಸ್ವಲ್ಪ ವಿಶ್ರಾಂತಿ ತೆಗೆದುಕೋ" ಎಂದು ಗಂಗಮ್ಮ ನವರು ಹೇಳಿದುದನ್ನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಟಾಂಗಾ ಗೊತ್ತು ಮಾಡಿ ಸಾಧನಕೇರಿಯವರೆಗೆ ಓಡಿದ. ರೋಹಿಣಿ ಅಲ್ಲಿರಲಿಲ್ಲ. ಈ ಮನೆ ಆ ಮನೆ ನೆರೆಮನೆಗಳಿಗೂ ಹುಡುಗರನ್ನು ಅಟ್ಟಿದರು. "ಈಗ ಬಂದಿದ್ದಳು. ತೆರಳಿ ಐದು ನಿಮಿಷವಾಯ್ತು" ಎಂದು ಎಲ್ಲರೂ ಹೇಳಿದರು. "ಈಗ ಮನೆಗೆ ತೆರಳುತ್ತಿದ್ದುದನ್ನು ನೋಡಿದೆ. ಚಂದ್ರಮೋಹನ ರಾಯರೊಂದಿಗೆ ಮಾತ ನಾಡುತ್ತಿದ್ದುದನ್ನು ನೋಡಿದೆ" ಎಂದೊಬ್ಬರು ತಿಳಿಸಿದರು.

'ಚಂದ್ರಮೋಹನ'ನೆಂಬ ಶಬ್ದವನ್ನು ಕೇಳಿದೊಡನೆಯೇ ಉತ್ತಮನ ಎದೆಗೆ ಚೂರಿಯಿಂದ ಇರಿದಂತಾಯ್ತು. ಸಿಡಿಲು ಬಡಿದವನಂತೆ ಅರೆಕ್ಷಣ ಕುಳಿತುಬಿಟ್ಟ. ಶೋಭನ ಪ್ರಸ್ತದ ದಿನ ನಡೆದ ಘಟನೆ ಗಕ್ಕನೇ ಅವನ ಸ್ಮೃತಿಪಟಲದಲ್ಲಿ ಬಂದು ನಿಂತಿತು. ಚಂದ್ರನಿಗೆ ರೋಹಿಣಿಯ ಮೇಲೆ ಬಹಳ ಮೋಹವಂತೆ. ನನಗೂ ಹಾಗೆಯೇ ಆಗಿದೆ. ನನ್ನ ಹೆಸರನ್ನು ಚಂದ್ರಮೋಹನನೆಂದು ಬದಲಾಯಿಸಿಕೊಳ್ಳುತ್ತೇನೆ" ಎಂದು ಅವನು ವಿನೋದ ಪೂರ್ಣವಾಗಿ ನುಡಿದ. ಆಗ ಅವಳು ಹಾಸಿಗೆಯಿಂದೆದ್ದು ಕಿಟಿ ಕಿಯ ಕಡೆ ತೆರಳಿದ್ದಳು. ತನ್ನೆರಡೂ ಕೈಗಳಿಂದ ಮೋರೆಯನ್ನು ಮುಚ್ಚಿ ಕೊಂಡಿದ್ದಳು. ಸೀರೆಯ ಸೆರಗನ್ನು ಕಣ್ಣಿಗೆ ತಂದುಕೊಂಡುದುದೂ ಇದೆ. ಉತ್ತಮನ ಮನಸ್ಸಿನಲ್ಲಿ ಸಂಶಯ ಪಿಶಾಚಿ ಹೊಕ್ಕಿಕೊಂಡಿತು. ಮೊದಲೇ ಸಿಟ್ಟಿನಿಂದಿದ್ದ ಉತ್ತಮ ಇನ್ನಷ್ಟು ಉಗ್ರ ಸ್ವರೂಪಿಯಾದ. ಹೊರಗೆ ಅದನ್ನು ತೋರಿಸಿಕೊಳ್ಳದೆ "ಕೆಲಸವಿದೆ" ಎಂದು ನೆವ ಹೇಳಿ ಅವಸರ ಅವಸರದಿಂದ ಮನೆಗೆ ಮತ್ತೆ ಓಡಿಬಂದ. ಆಗಲೂ ರೋಹಿಣಿ ಬಂದಿರಲಿಲ್ಲ. ಅವನ ಸಂಶಯ ಇನ್ನಷ್ಟು ಬಲವಾಯ್ತು. ಗುಂಡಿನ ಪೆಟ್ಟು ತಗದಲಿ

ಗಟ್ಟದ ಹುಲಿಯಂತೆ ಅಟ್ಟವೇರಿ ಕುಳಿತ. ಮನುಷ್ಯರನ್ನು ಕಂಡಕೂಡಲೇ ಮೈಮೇಲೆ ಹಾರುವ ಹುಲಿಯಂತೆ ರೋಹಿಣಿ ಮೆಟ್ಟಿಲೇರಿ ಬಂದೊಡನೆಯೇ ಜಿಗಿದು ನಿಂತು ಕೇಳಿದ. ‘ ಎಲ್ಲಿಗೆ ಹೋಗಿದ್ದೀ ಇಷ್ಟು ಹೊತ್ತು?”

ರೋಹಿಣಿ ಕರುಣಾ ದೃಷ್ಟಿಯಿಂದ ಅವನ ಕಡೆ ನೋಡಿದಳು. ಉತ್ತರ ಕೊಡಲಿಲ್ಲ.

ಮೋಹನ ಅವಳ ಸಮೀಪ ಬಂದು ಎರಡೂ ಬುಜಗಳನ್ನು ಹಿಡಿದು ಅಲುಗಿಸಿ, ಪುನಃ ಅದೇ ಪ್ರಶ್ನೆಯನ್ನು ಹಾಕಿದ. “ ಹೇಳು ಎಲ್ಲಿಗೆ ಹೋಗಿದ್ದಿ ? ”

ಕಾದ ಕಬ್ಬಿಣದ ಸರಳುಗಳಂತೆ ಅವನ ದೃಷ್ಟಿ ಅವಳ ಕಣ್ಣುಗಳೆರಡನ್ನೂ ಚುಚ್ಚಿದುವು. ಅವಳು ಕುರುಡಳಾದಳು.

ಉತ್ತಮನ ಬಲಗೈ ಅವಳ ಕೆನ್ನೆಯ ಮೇಲೆ “ ಪಟಲ್, ಪಟಲ್ ” ಎಂದು ಬಿದ್ದಿತು. ರೋಹಿಣಿ ಚಕಾರ ಶಬ್ದ ತೆಗೆಯಲಿಲ್ಲ. ಕಣ್ಣೆವೆಗಳನ್ನು ತೆರೆಯಲಿಲ್ಲ. ಆದರೆ ಅಟ್ಟದ ಮೆಟ್ಟಲುಗಳ ಬುಡದಲ್ಲಿ ನಿಂತಿದ್ದ ಗಂಗಮ್ಮನವರು ಸಪ್ಪಳ ಕೇಳಿ “ ಏನೋ ಉತ್ತಮ ಇದು? ಏನಿದು ? ಏನು ನಿನಗೆ ಬುದ್ಧಿಗಿದ್ದಿ ಇದೆಯೋ ಇಲ್ಲವೋ ? ಸಾತಾರದಲ್ಲಿದ್ದು ಇದ್ದ ಬುದ್ಧಿ ಕೆಟ್ಟು ಹೋಯಿತೇ ಹೇಗೆ ? ” ಎಂದು ಹೇಳುತ್ತ ಅಟ್ಟದ ಮೇಲೆ ಬಂದರು.

ರೋಹಿಣಿ ಗೋಡೆಯ ಬದಿಯಲ್ಲಿ ನಿಂತಿದ್ದಳು. ಉತ್ತಮ ತನ್ನ ಮಂಚದ ಒರಗಿ ಕುಳಿತಿದ್ದ. ಒಬ್ಬೊಬ್ಬರ ಮುಖ ಒಂದೊಂದು ಕಡೆ. ಅವಳು ಮ್ಲಾನವದನಳಾಗಿದ್ದಾಳೆ. ಅವನ ಮೋರೆಯಲ್ಲಿ ಜೋಳ ಅರಳಾದೀತು. ಬಾಗಿಲಿನಲ್ಲೇ ನಿಂತು ಗಂಗಮ್ಮನವರು ಉತ್ತಮನನ್ನುದ್ದೇಶಿಸಿ ಹೇಳಿದರು. “ ನೀನು ಈ ಹೊತ್ತು ಬರುತ್ತೀ ಎಂದು ನಮಗೆಲ್ಲ ಕನಸು ಬಿದ್ದಿತ್ತೇನು ? ನೀನು ಬಂದರೇನಾಯ್ತು ? ನೀನು ದೊಡ್ಡ ಬಾಜೀರಾಯ ! ಅವಳು ತವರು ಮನೆಗೆ ತೆರಳಬಾರದೇನು? ಬೇರೆ ಹೆಣ್ಣುಮಕ್ಕಳು ತವರೂರಿಗೆ ತೆರಳಿದರೆ ತಿಂಗಳಾನುಗಟ್ಟಲೆ ಇದ್ದು ಬರುತ್ತಾರೆ. ಲಗ್ನವಾಗಿ ಇಷ್ಟು ಕಾಲವಾಯ್ತು ಒಂದೆರಡು ಸಲವೂ ಅವಳು ಹೋಗಿಲ್ಲ. ಮುಂಜಾನೆ ಹೋದರೆ ಸಂಜೆಗೆ ಮತ್ತೆ ಓಡಿಕೋತ ಬರುತ್ತಾಳೆ. ನಿನ್ನದು

ಭಾರಿ ಆಯಿತಪ್ಪಾ ಇತ್ತೀಚೆಗೆ. ''

ಅವನು ಇದಿರುತ್ತರ ಕೊಡಲಿಲ್ಲ.

ಗಂಗವ್ವನವರು ಮುಂದೆ ಬಂದು ರೋಹಿಣಿಯ ಕೈಹಿಡಿದು ನುಡಿದರು. '' ಕೊರಳಿಗೊಂದು ಕರಿಮಣಿ ಕಟ್ಟದ ಕೂಡಲೇ ಗಂಡಸರಿಗೆ ಭಾರೀ ಅಧಿಕಾರ ಬಂತು ! ಅವರ ತಲೆಗೆ ಕೋಡೇ ಮೂಡುತ್ತವೆ. ಅವಳು ಮನೆ ಬಿಟ್ಟು ತೆರಳುವಂತಿಲ್ಲ. ಪರರೊಡನೆ ಮಾತನಾಡಲೂ ಬಾರದು. ನಗಬಾರದು. ಹರಟೆ ಹೊಡೆಯ ಕೂಡದು. ಮುಂಜಾನೆಯಿಂದ ಸಂಜೆಯವರೆಗೆ ದುಡಿಯುತ್ತ ಇರಬೇಕು. ಯಂತ್ರ ಯಂತ್ರದ ಹಾಗೆ! ಎಂದರೆ ಗಂಡಸರಿಗೆ ಆನಂದ. ಪರಮಾನಂದ. ಜೈಲಿದು ಜೈಲು.! ಮನೆಯೆಂದರೆ ಹೆಣ್ಣಿಗೆ ಜೈಲು ! ಹೆಣ್ಣಾಗಿ ಹುಟ್ಟಯೇ ನಾವು ಪಾಪ ಮಾಡಿದ್ದೇವೆ. ಏನು ಮಾಡೋಣ ಹೇಳು. ಅನುಭವಿಸಲಿಕ್ಕೇ ಬಂದಿದ್ದೇವೆ. ಬಾ !! ''

ರೋಹಿಣಿ ಬರಲಿಲ್ಲ. " ನೀವು ಹೋಗಿರಿ ಅತ್ತೆ. ನಾನೀಗ ಬರುತ್ತೇನೆ '' ಎಂದಳು.

" ನೀವು ಏನಾದರೂ ಮಾಡಿಕೊಳ್ಳಿ '' ಎಂದು ಹೇಳುತ್ತ ಗಂಗವ್ವನವರು ಇಳಿದು ಹೋದರು.

ರೋಹಿಣಿ ಬಾಗಿಲಿಗೆ ಅಗಳಿಕ್ಕಿ ಉತ್ತಮ ಕುಳಿತಿದ್ದ ಮಂಚದ ಬಳಿ ನಿಂತು ಹೇಳಿದಳು. " ಬಾಗಿಲಿಗೆ ಚಿಲುಕವಿಕ್ಕಿದ್ದೇನೆ. ನಾನು ಓಡಿ ಹೋಗುವುದಿಲ್ಲ. ಅಳುವುದೂ ಇಲ್ಲ. ಸ್ವೇಚ್ಛೆಯಿಂದ ಹೊಡೆಯಿರಿ. ಬರಿಗೈಯಿಂದ ಹೊಡೆದರೆ ನನಗಷ್ಟು ನೋವಾಗಲಿಕ್ಕಿಲ್ಲ. ಒಂದು ಬೆತ್ತ, ಬಡಿಗೆ, ಅಥವಾ ಕಟ್ಟಿಗೆ ಹಿಡಿದುಕೊಂಡರೇ ಒಳ್ಳೆಯದು. ನಿಮಗೆ ಈ ದೇಹದ ಮೇಲೆ ಪೂರ್ಣ ಅಧಿಕಾರವಿದೆ. ಅದಕ್ಕೆ ದೇವರು ಸ್ವಲ್ಪ ರೂಪ ಕೊಟ್ಟುದುದರಿಂದಲೇ ಇಷ್ಟೆಲ್ಲ ತೊಂದರೆ ಬಂದಿದೆ. ಅದನ್ನು ದಂಡಿಸಲೇಬೇಕು. ದಂಡಿಸಿರಿ. ಪೆಟ್ಟು ಬೀಳದೆ ಕೂಡಾ ಬಹಳ ವರುಷಗಳಾಗಿವೆ. ಸಣ್ಣವಳಿದ್ದಾಗ ತಂದೆ ತಾಯಿ ಅಣ್ಣಂದಿರು ಎಲ್ಲಾದರೂ ಏಟುಗಳನ್ನು ಹಾಕಿದ್ದರೋ ಏನೋ ! ನನಗೆ ಬುದ್ಧಿ ತಿಳಿದ ಮೇಲಂತೂ ಗೊತ್ತಿಲ್ಲ. ಯಾರ ಹೆದರಿಕೆಯೂ ಇಲ್ಲದೆ ಜೀವ ಬೆಳೆದಂತೆ ತೋರುತ್ತದೆ. ಅದಕ್ಕೆ ಶಿಕ್ಷೆ ಅವಶ್ಯ. ಬಡಿಯಿರಿ. ಸಾಯ ಬಡಿಯಿರಿ ''

ಉತ್ತಮನು ಎದ್ದು ಬಾಗಿಲು ತೆರೆದು ಹೊರ ಜಗಲಿಯ ಕುರ್ಚಿಯಲ್ಲಿ ಕುಳಿತು ಸುವಾಸನೆಯ ಗಾಳಿ ಸೇದತೊಡಗಿದ.

## ಹತ್ತನೆಯ ಅಧ್ಯಾಯ

ರೋಹಿಣಿಯನ್ನು ಹೊಡೆದ ಮೇಲೆ ಎರಡು ಮೂರು ದಿನಗಳ ವರೆಗೆ ಪುರುಷೋತ್ತಮ ಸ್ವಲ್ಪ ಬೇಸರದಿಂದಿದ್ದ. ತನ್ನ ಸಂಯಮರಹಿತ ವರ್ತನೆಯಿಂದ ಅವನಿಗೂ ಪಶ್ಚಾತ್ತಾಪವಾಗಿದೆ. ಅಷ್ಟು ದುಡುಕ ಬಾರದಿತ್ತೆಂದು ಅನ್ನಿಸಿದೆ. ಅದರಿಂದ ತಾಯಿಗೆ ಈ ಸಂಗತಿ ಗೊತ್ತಾಯಿತಲ್ಲ ಎಂದು ಇನ್ನೊಂದು ಎದೆಗುದಿ. ಅದೇ ಕಾಲಕ್ಕೆ ಹಾವೇರಿಗೆ ತೆಳಿದ್ದ ಅವನ ತಂದೆಯವರು ಹಿಂತಿರುಗಿದರು. ಅವರಿಗೂ ತಾಯಿ ತಿಳಿಸಿರಬೇಕೆಂದು ಉತ್ತಮನ ಊಹೆ. ನಾರಾಯಣರಾಯರು ಏನನ್ನೂ ಕೇಳಲಿಲ್ಲ. ಏನನ್ನೂ ಹೇಳಲಿಲ್ಲ. ಆ ಮಾತು ಬೇರೆ. ಆದರೆ, ಅವರ ಮೋರೆಯನ್ನು ಸರಿಯಾಗಿ ನೋಡಿ ಮಾತನಾಡಲು ಅವನಿಗೇ ಸ್ವಲ್ಪ ಸಂಕೋಚ. ಉತ್ತಮನು ಲಜ್ಜಿತನಾದ.

ರೋಹಿಣಿ ಕೂಡಾ ಅವನು ನಾಚುವಂತೆಯೇ ಮಾಡಿದಳು. ಹೊಡೆದ ಪ್ರತಿಕ್ರಿಯೆ ಅವಳಲ್ಲಿ ಲವಲೇಶವೂ ಕಾಣಿಸಲಿಲ್ಲ. "ಯಾಕೆ ಹೊಡೆದಿರಿ?" ಎಂದು ಕೇಳಲಿಲ್ಲ. ಮಾತನಾಡಲು ಅವನಿಗೇ ಅಧೈರ್ಯ ಆದರೆ ಅವಳು ಮಾತು ಬಿಡಲಿಲ್ಲ. ಅವಳನ್ನು ಮುಟ್ಟಲು ಅವನಿಗೇ ಅಂಜಿಕೆ. ಅದರೆ ಅವಳೇ ಮುಂಜಾನೆ ಅವನ ಮೈಮುಟ್ಟಿ ಅಲುಗಿಸಿ, "ಏಳಿ, ಏಳಿ, ಚಹಾ ಆಯಿತು" ಎಂದು ಎಬ್ಬಿಸುವಳು. ಅವನು ಚಹಾ ಕುಡಿದು ಅತ್ತಿತ್ತ ಅಲೆಯುವಾಗ, "ಬಿಸಿನೀರು ಸಿದ್ಧವಾಗಿದೆ. ಸ್ನಾನಕ್ಕೆ ಬನ್ನಿ" ಎಂದು ಕರೆಯುವಳು. ಸ್ನಾನ ತೀರಿಸಿ ಪುಸ್ತಕದ ಕೆಲವು ಹಾಳೆಗಳನ್ನು ಮಗುಚಿ ಹಾಕಿದಾಗ ಊಟದ ಹೊತ್ತಾಗುತ್ತದೆ. ಏಕೆಂದರೆ ಹನ್ನೊಂದಕ್ಕೆ ಅವನು ಆಫೀಸು ಮುಟ್ಟಬೇಕು. ಆದುದರಿಂದ ಹತ್ತು ಗಂಟೆಗೆ ಊಟ. ಅವನು ಊಟ ಮಾಡುತ್ತಿದ್ದಾಗ ಟ್ರಂಕ್‌ನಿಂದ ಹೊಸ ಬಟ್ಟೆಬರೆ ತೆಗೆದಿ

ಡುವಳು. ಆಫೀಸಿಗೆ ಹೊರಟಾಗ ಗೇಟಿನ ಚಿಲುಕ ತೆಗೆದು ಬಾಗಿಲುಗಳನ್ನು ದೂಡುವಳು. ಪುರುಷೋತ್ತಮನಿಗೆ ಅವಳ ಈ ಪ್ರೀತಿಪುರಸ್ಸರವಾದ ರೀತಿ ನೀತಿ ಕಂಡು ಆಶ್ಚರ್ಯ. ಅವಳ ಜೀವನದ ದ್ವಿಮುಖಗಳು ಅವನಿಗೇ ಅರ್ಥವಾಗಲೊಲ್ಲದು.

ಬಿಡುವಿದ್ದ ಒಂದು ಆದಿತ್ಯವಾರ ಪುರುಷೋತ್ತಮ ಪೇಟೆ ಕಡೆ ತೆರಳಲಿಲ್ಲ. ಅವನು ಸಾತಾರದಲ್ಲಿದ್ದಾಗ ತಾನು ಓದಿದ ಪುಸ್ತಕಗಳನ್ನೆಲ್ಲ ಅವನಿಗೆ ರೋಹಿಣಿ ತೋರಿಸಿದಳು. ತಲೆದಿಂಬಿನ ಹೊದಿಕೆ, ಮೇಜಿನ ಬಟ್ಟೆ, ಕಿಟಿಕಿಗಳ ಪರದೆ ಮೊದಲಾದವುಗಳಿಗೆ ಬರೆದ ಹೂವಿನ ಕಸೂತಿ ಚಿತ್ರಗಳನ್ನು ಅವನ ಮುಂದಿಟ್ಟಳು. ಅವನ ಹೆಸರಿನ ಒಂದಕ್ಷರವನ್ನು ಬರೆದ ಕೆಲವು ಕರವಸ್ತ್ರವನ್ನು ಅವನಿಗೆ ಅರ್ಪಿಸಿದಳು. ಅವನಿಗಾಗಿ ತಾನು ಹೆಣೆಯುತ್ತಿರುವ ಉಣ್ಣೆಯ ಮೇಲಂಗಿಯನ್ನು ತಂದು, " ಈ ಚೊಕಲೇಟ್ ಬಣ್ಣ ನಿಮಗೆ ಪ್ರಿಯವಾಗಬಹುದಲ್ಲವೆ? " ಎಂದು ಪ್ರಶ್ನಿಸಿದಳು. ಮುಂಜಾನೆಯಿಂದ ಸಂಜೆಯ ವರೆಗೆ ಅವನು ಮನೆಯಲ್ಲಿದ್ದ. ರೋಹಿಣಿ ಒಂದಲ್ಲ ಒಂದು ವಿಚಾರವನ್ನರುಹಿ ಅಥವಾ ವಸ್ತುವನ್ನು ತೋರಿಸಿ ಅವನಿಗೆ ಸಂತೋಷವನ್ನುಂಟು ಮಾಡಿದಳು.

ಅದೇ ಸಂಜೆ ರೋಹಿಣಿ ಹಾಲು, ಸಕ್ಕರೆ, ಚಹಾಪುಡಿ, ಬಿಸಿನೀರು ಮೊದಲಾದವುಗಳನ್ನು ಪ್ರತ್ಯಪ್ರತ್ಯೇಕ ಲೋಟಗಳಲ್ಲಿಟ್ಟಿದ್ದ ಬೆಳ್ಳಿಯ " ಟೀ ಸೆಟ್ " ಹಿಡಿದುಕೊಂಡು ಅಟ್ಟದ ಮೇಲೇರಿ ಬಂದಳು. ಚಹಾ ಸೋಸಿ ಹಾಲು ಸಕ್ಕರೆ ಬೆರಸಿ ಚಹಾ ಕೊಡಲು ಮಂಚದ ಬಳಿಗೆ ಬಂದಳು. ಕೈಯ್ಯಿಂದ ಬೆಳ್ಳಿಯ ಕಪ್ಪನ್ನು ಸ್ವೀಕರಿಸಿದ ಉತ್ತಮ ಒಂದೊಂದು ಗುಟುಕು ಕುಡಿದು ಚಹಾವನ್ನು ವರ್ಣಿಸಿದ. ಅವಳು ಪುನಃ ಕಪ್ ತೆಗೆದುಕೊಳ್ಳಲು ಬಂದಾಗ ಹೇಳಿದ. " ರೋಹಿಣೀ, ನಾವಿಬ್ಬರೂ ತಿರುಗಾಡಲು ಹೋಗೋಣ. ಬೇಗನೇ ಹೊರಡು. "

ರೋಹಿಣಿ ಕೆಳಗೆ ಬಂದು ಹೊರಡಲನುವಾದಳು. ಕೈಕಾಲು ಮೋರೆಗಳಿಗೆಲ್ಲ ಪರಿಮಳ ಸಾಬೂನು ಸವರಿ ತಿಕ್ಕಿ ಒರಸಿಕೊಂಡಳು. ಅತ್ತೆ ತಲೆಗೆ ಎಣ್ಣೆ ಪೂಸಿ ಬಾಚಿ ಹೆರಳು ಹಾಕಿ, ಮುಡಿ ಸುತ್ತಿದರು. ಮೋರೆಗೆ ಪೌಡರ್,ಕಣ್ಣಿಗೆ ಕಾಡಿಗೆ ಹಣೆಗೆ ಕುಂಕುಮ, ಕೈಗಳಿಗೆ ಬಳೆಗಳು, ಸರ್ವಾ

ಲಂಕಾರ ಭೂಷಿತೆಯಾದಳು. ಆ ಮೇಲೆ ಪುನಃ ಅಟ್ಟಕ್ಕೆ ಬಂದು "ಯಾವ ಸೀರೆಯನ್ನು ಉಟ್ಟುಕೊಳ್ಳಲಿ ?" ಎಂದು ಉತ್ತಮನನ್ನುದ್ದೇಶಿಸಿ ಕೇಳಿದಳು.

"ಸೀರೆಯ ಅಂದಚಂದ ನನಗೇನು ಗೊತ್ತು ? ನಾನು ಅವುಗಳನ್ನು ಉಡುವುದಿಲ್ಲವಲ್ಲ" ಎಂದವನು ನಕ್ಕು ನುಡಿದ.

"ಹಾಗಲ್ಲ. ನಿಮಗೆ ಇಷ್ಟವಾದುದನ್ನು ತೊಟ್ಟುಕೊಳ್ಳುತ್ತೇನೆ"

"ನಿನಗಿಷ್ಟವಾದುದನ್ನು ಧರಿಸಿಕೋ"

"ನನ್ನಿಷ್ಟ ನಿಮ್ಮಿಷ್ಟವಾದೀತೆ ?"

"ಆಗದೇ ಏನು ?" ಎಂದುತ್ತರ ಕೊಟ್ಟ ಉತ್ತಮ ಮತ್ತೆ ಸ್ವಲ್ಪ ಯೋಚಿಸಿ, "ಒಂದು ವೇಳೆ ನನಗೆ ಪ್ರಿಯವಾಗದಿದ್ದರೂ ನಿನಗೆ ಇಷ್ಟವಾದುದರ ಮೇಲೆ ನನ್ನ ವಿರೋಧವಿಲ್ಲ" ಎಂದು ಮಾತು ಕೂಡಿಸಿದ.

ರೋಹಿಣಿ ಪುನಃ ಬಂದು ಟ್ರಂಕುಗಳ ಕೀಲಿ ತೆಗೆದು ಅಂದವಾದ ಲೇಸ್ ಹೊಲಿದ ಲಂಗ, ಜರತಾರಿ ಅಂಚುಗಳುಳ್ಳ ಕುಬಸ, ಆಕಾಶ ಬಣ್ಣದ ರೇಶ್ಮೆಯ ಸೀರೆ ಇವುಗಳನ್ನೆಲ್ಲ ತೆಗೆದು ತೊಟ್ಟುಕೊಂಡಳು. ಗಂಗಮ್ಮನವರು ಒಂದು ಚೀಲದಲ್ಲಿ ಉಂಡೆ, ಬಿಸ್ಕಿಟು, ಅವಲಕ್ಕಿ ಮೊದಲಾದವುಗಳನ್ನು ತುಂಬಿಸಿ ಸೊಸೆಯ ಕೈಯಲ್ಲಿಟ್ಟರು. ಬಂಗಾಲಿಗಳಂತೆ ಧೋತರ, ಉದ್ದ ತೋಳಿನ ರೇಶ್ಮೆಯ ಅಂಗಿ, ಗುಜರಾಥಿಗಳಂತೆ ಹೂವು ಬಿಡಿಸಿದ ಟೊಪ್ಪಿಗೆ ಧರಿಸಿದ ಉತ್ತಮ ಅಟ್ಟ ಇಳಿದು ಬಂದ. ಇಬ್ಬರೂ ಅಂಗಳ ದಾಟಿ, ಗೇಟನ್ನು ದೂಡಿಕೊಂಡು ಹೋದರು. ಗಂಗಮ್ಮನವರ ಆನಂದಾತಿಶಯಕ್ಕೆ ಪಾರವೇ ಇರಲಿಲ್ಲ. ಕಿಟಕಿಯ ಸರಳುಗಳ ಮೂಲಕ ಅವರು ನೋಡುತ್ತ ಬಹಳ ಹೊತ್ತಿನ ವರೆಗೆ ನಿಂತಿದ್ದರು. ಕಂಪೌಂಡಿನ ಗೋಡೆಯ ಮೇಲೆ ಗುಬ್ಬಿ ತನ್ನ ಮರಿಗೆ ಗುಟುಕು ಕೊಡುತ್ತಿರುವುದು ಅವರ ಗಮನವನ್ನು ಸೆಳೆದಿದೆ.

ಇತ್ತ ಮನೆಯಿಂದ ಹೊರಟಿದ್ದ ಉತ್ತಮ ಮತ್ತು ರೋಹಿಣಿ ಡಾರ್ ರಸ್ತೆಗೆ ಬಂದರು. "ನಾವು ಯಾವ ಕಡೆ ತೆರಳೋಣ?" ಎಂದು ಉತ್ತಮ ಹೆಂಡತಿಯ ಮೋರೆ ನೋಡಿ ಕೇಳಿದ.

"ಎಲ್ಲಾದರೂ. ನೀವು ಕರೆದಲ್ಲಿಗೆ"

ಉತ್ತಮ ಸ್ಟೇಶನ್ ರಸ್ತೆ ಹಿಡಿದ. ಅವಳೂ ಅನುಸರಿಸಿದಳು. ಕೆಲವು ಹೆಜ್ಜೆಗಳನ್ನಿಟ್ಟ ಮೇಲೆ ಉತ್ತಮ ಹೊರಳಿ, "ನಡೆಯಲು ನಿನಗೆ ಆಯಾಸವಾಗುವುದಾದರೆ ಟಾಂಗಾ ಗೊತ್ತು ಮಾಡುತ್ತೇನೆ" ಎಂದ.

"ಆಯಾಸವಿಲ್ಲ. ನಡೆದು ನನಗೆ ಅಭ್ಯಾಸವಿದೆ."

'ದೂರವಿದೆ ಇನ್ನೂ. ಸ್ಟೇಶನ್ ದಾಟಿ ಅದರಾಚೆ ಇರುವ ಮಾವಿನ ತೋಫಿಗೆ ತೆರಳಬೇಕು."

"ಓಹೋ, ತಯ್ಯಾರ್"

ಮಾವಿನ ತೋಫಿಗೆ ಪ್ರವೇಶಿಸಿದವರೂ ಬಹಳ ದೂರದ ವರೆಗೆ ನುಸುಳಿದರು. ನಿರ್ಜನ ಸ್ಥಳ. ಮನುಷ್ಯರ ಮಾತಿನ ಗುಲ್ಲು ಸೊಲ್ಲು ಕೇಳಿಸುವುದೇ ಇಲ್ಲ. ಟಾಂಗಾ ಅಥವಾ ಮೋಟಾರ್‌ಗಳ ಹಾರ್ನ್ ಶಬ್ದವೂ ಇಲ್ಲ. ಜಟ್ಟಿ ಹುಳಗಳು ಅಲ್ಲಲ್ಲಿ 'ಜೀಂ, ಜೀಂ" ಎಂದು ಕೂಗುತ್ತಿವೆ. ಬಣ್ಣದ ಪತಂಗ ಹೂವನ್ನರಸುತ್ತ ಹಾರುತ್ತಿದೆ. ಅವರು ಕಾಲಿಟ್ಟಾಗ ಹಸುರು ಹುಲ್ಲುಗಳ ಎಡೆಗಳಿಂದ ಒಂದೊಂದು ಮಿಡಿತೆ ಬಾಣದಂತೆ ಸಟಕ್ಕನೇ ಎದ್ದು ಮತ್ತೊಂದೆಡೆ ನೆಗೆದು ಹುಲ್ಲಿನ ಅಲಗುಗಳ ಮಧ್ಯೆ ಮರೆಯಾಗುತ್ತಿದೆ. ಉಳಿದುದೆಲ್ಲ ನಿಶ್ಶಬ್ದ. ಒಂದು ಕಸಿಗಿಡದ ಬುಡಕ್ಕೆ ಬಂದು ಉತ್ತಮ ಕರವಸ್ತ್ರವನ್ನು ಹಾಸಿ ಕುಳಿತ. ರೋಹಿಣಿಯೂ ಬಳಿಯಲ್ಲಿ ಇದಿರು ಬದಿರಾಗಿ ಕುಳಿತಳು. ಬೆರಗಾದ ಅವಳ ಮುಖವನ್ನು ನೋಡಿ ಉತ್ತಮ ಪ್ರಶ್ನಿಸಿದ. "ಏನು ಹೆದರಿಕೆಯಾಗುತ್ತದೆಯೇ ನಿನಗೆ?"

"ಇಲ್ಲ" ಎಂದ ರೋಹಿಣಿ, "ಈ ತೋಟದಲ್ಲಿವನ್ಯ ಮೃಗಗಳಿಲ್ಲ" ಎಂದು ಪದ ಜೋಡಿಸಿದಳು.

"ಕಾಡು ಪ್ರಾಣಿಗಳ ವಿಷಯ ನಾನು ಹೇಳಿದುದಲ್ಲ. ನನ್ನೊಡನೆ ಇಲ್ಲಿಯ ವರೆಗೆ ಬರಲು ನಿನಗೆ ಭಯವಾಗಲಿಲ್ಲವೇ?"

"ಇಲ್ಲ" ಎಂದೇ ಪುನಃ ಉತ್ತರ ಹೊರಟಿತು. ಆದರೆ ಅಷ್ಟಕ್ಕೆ ಅವಳು ನಿಲ್ಲಿಸಲಿಲ್ಲ. "ನಾನೇನು ಹುಲಿ ಸಿಂಹಗಳನ್ನು ಕಟ್ಟಿಕೊಂಡಿದ್ದೇನೇನು? ನಿನಗೆ ಯಾಕೆ ಭಯ?" ಎಂದು ಹಿಂದೊಮ್ಮೆ ನೀವು ಹೇಳಿದ್ದೀರಿ. ನನಗೆ ಭಯವಿಲ್ಲ" ಎಂದು ಅವಳು ನುಡಿದಳು.

ಶೋಭನ ಪ್ರಸ್ತದ ರಾತ್ರಿ ಉತ್ತಮ ಆ ಅಭಯವನ್ನು ಕೊಟ್ಟಿದ್ದ.

ಅವಳ ಸ್ಮರಣ ಶಕ್ತಿ ಕಂಡು ಅವನಿಗೇ ವಿಸ್ಮಯ. ಉತ್ತಮ ಒಂದು ಹುಲ್ಲು ಕಡ್ಡಿಯನ್ನು ಕಿತ್ತು ಅದರ ಒಂದು ತುದಿಯನ್ನು ಜಗಿಯುತ್ತ ಹೇಳಿದ. "ಇಲ್ಲಿಯ ವರೆಗೆ ನಾವು ಬಂದುದು ಏಕೆಂದು ನಿನಗೆ ಗೊತ್ತಾಯಿತೇ?"

"ಗೊತ್ತಿದೆ. ತಿರುಗಾಡಲು ತೆರಳೋಣ ಎಂದು ನೀವು ತಿಳಿಸಿದಾಗಲೇ ಊಹಿಸಿದೆ".

"ಒಳ್ಳೇದು" ಎಂದ ಉತ್ತಮ ಮತ್ತಿಂತೆಂದ. "ರೋಹಿಣೀ, ನಿನ್ನೊಡನೆ ಮನಬಿಚ್ಚಿ ನಾಲ್ಕು ಮಾತುಗಳನ್ನಾಡಲು ನನಗೆ ಇಷ್ಟವಾಗಿದೆ. ಮನೆ ಅದಕ್ಕೆ ಯೋಗ್ಯ ಸ್ಥಳವಲ್ಲ. ಅದಕ್ಕಾಗಿ ನಿನ್ನನ್ನು ಇಲ್ಲಿಯ ವರೆಗೆ ಕರೆದುಕೊಂಡು ಬಂದೆ. ಎಲ್ಲವನ್ನೂ ಬಿಡಿಸಿ ಹೇಳುವ ಅಗತ್ಯವಿಲ್ಲ. ನಿನಗೆ ಅರ್ಥವಾಗುತ್ತದಲ್ಲವೇ ರೋಹಿಣಿ?"

"ಆಗುತ್ತದೆ"

"ನೀನು ನನ್ನ ಹೆಂಡತಿ. ಆದರೆ ಅದು ಹೆಸರಿಗೆ ಮಾತ್ರ. ಆದರ ಕಾರಣವೇನೋ ನಾನರಿಯೆ?"

"ನಿಮಗೆ ಗೊತ್ತಾಗಲಿಲ್ಲವೇ?"

"ಇಲ್ಲ?"

"ಮತ್ತೆ ಮೊನ್ನೆ ಹೊಡೆದಿರಿ ಏತಕ್ಕೆ?"

"ಸಂಶಯದಿಂದ ಹೊಡೆದೆ"

ಏನು ಸಂಶಯವೆಂದು ಅವಳು ಕೇಳಲಿಲ್ಲ. ಕೈಯಿಂದ ಕುಸುರು ಹುಲ್ಲನ್ನು ಎಳೆಯುತ್ತ ಅವಳು ಹೇಳಿದಳು. "ನೀವು ಈಗಾಗಲೇ ನೊಂದುಕೊಂಡಿದ್ದೀರಿ. ನಾನು ಮನ ಬಿಚ್ಚಿ ಮಾತನಾಡಿದರೆ ಅದರಿಂದ ಆ ನೋವು ಹೆಚ್ಚಾಗುವ ಸಂಭವವೇ ಇದೆ."

"ಅಡ್ಡಿಯಿಲ್ಲ ರೋಹಿಣೀ. ಬಚ್ಚಿಟ್ಟುಕೊಳ್ಳುವದರಿಂದ ಮೂಕ ಸಂಕಟ ಕಡಿಮೆ ಏನೂ ಇಲ್ಲ."

ರೋಹಿಣಿ ಬಹಳ ಹೊತ್ತಿನ ವರೆಗೆ ಆಲೋಚಿಸಿದಳು. ಅವಳ ಕಣ್ಣಿನಿಂದ ಕೆಲವು ಹನಿಗಳೂ ಹುಲ್ಲಿನ ಮೇಲೆ ಉದುರಿ ಮುತ್ತಿನಂತೆ ಅಲ್ಲೇ ಉಳಿಯಿತು. ಅವಳು ಹುಲ್ಲನ್ನು ಕಿತ್ತಿದಾಗ ಆ ಹನಿಯ ಕಣಗಳು ಉತ್ತಮನ ಮೋರೆಗೂ ಸಿಡಿದುವು. ಉತ್ತಮ ಭರವಸೆಯ ಮಾತುಗಳನ್ನಾಡಿದ.

" ರೋಹಿಣೀ, ಹೇಳು. ಮನಸ್ಸಿನಲ್ಲಿ ವ್ಯಥಾ ಕೊರಗಬೇಡ. ಅದರಿಂದ ನೀನೂ ದುಃಖಿ. ನನಗೂ ದುಃಖವೇ. ಹೇಳಿದರೆ ಮನಸ್ಸಿನ ಭಾರವೆಷ್ಟೋ ಕಡಿಮೆಯಾಗಬಹುದು. "

ಅವಳು ಕಣ್ಣುಗಳನ್ನೊರಸಿಕೊಂಡು ಕೇಳಿದಳು. ' ಸ್ವಾಮೀ, ನೀವು ಕಲಿಯುತ್ತಿದ್ದಾಗ ಶಾಲೆಯಲ್ಲಿ ಅಥವಾ ಕಾಲೇಜಿನಲ್ಲಿ ಸುಂದರಿಯರಾದ ಹುಡುಗಿಯರು ಇರಲಿಲ್ಲವೇ ? "

" ಇದ್ದರು. ಬಹಳ ಇದ್ದರು "

" ಅವರೊಬ್ಬರೂ ನಿಮ್ಮನ್ನು ಆಕರ್ಷಿಸಲಿಲ್ಲವೇ ? "

" ಒಮ್ಮೊಮ್ಮೆ ಮನಸ್ಸು ಹಾರಾಡುತ್ತಿತ್ತು "

" ಅಷ್ಟೇ ? ನೀವು ಯಾರೊಡನೆಯೂ ಪ್ರೇಮ ಬೆಳೆಸಲಿಲ್ಲವೇ ?

" ಇಲ್ಲ ರೋಹಿಣೀ "

" ನೀವು ಪುಣ್ಯವಂತರು ಸ್ವಾಮೀ. ನಿಮ್ಮಂತಹ ಜನರು ವಿರಳ. ಮನೆಗೊಬ್ಬನೇ ಮಗ. ಶ್ರೀಮಂತರು. ಇಂತಹ ಹುಡುಗರು ನಿಮ್ಮಂತಿರುವುದು ಕ್ವಚಿತ. ಅದಕ್ಕೆಂದೇ ನೀವು ಅದೃಷ್ಟಶಾಲಿಗಳೆಂದು ಹೇಳಿದೆ. ಏಕೆಂದರೆ ಪ್ರಣಯ ಭಂಗದ ಅನಂತ ವೇದನೆಗಳನ್ನು ಸಹಿಸುವ ಸಂಕಟದಿಂದ ಪಾರಾದಿರಿ. ಆ ದೃಷ್ಟಿಯಲ್ಲಿ ನಾನು ಭಾಗ್ಯವಿಹೀನೆ ಸ್ವಾಮೀ "

ಉತ್ತಮ ಮಾವಿನ ಕಾಂಡಕ್ಕೆ ತಲೆಯನ್ನು ಒತ್ತಿಟ್ಟು ಒರಗಿದ. ರೋಹಿಣಿಯೇ ಮಾತಿಗೆ ಮಾತು ಪೋಣಿಸಿ ತನ್ನ ಪ್ರಣಯ ಕತೆಯನ್ನು ಸಂಕ್ಷೇಪವಾಗಿ ವಿವರಿಸಿದಳು. ಕೇಳಿದ ಉತ್ತಮ ರೇಗಾಡಲಿಲ್ಲ. ಅಥವಾ ಕಣ್ಣೀರು ಸುರಿಸಲಿಲ್ಲ. ನಿಟ್ಟುಸಿರು ಬಿಡುತ್ತ ಹೇಳಿದ. " ರೋಹಿಣೀ, ನೀನು ಬಹಳ ದೊಡ್ಡ ತಪ್ಪನ್ನು ಮಾಡಿದೆ. ನಿನ್ನ ಕಾಲಿನ ಮೇಲೆ ನೀನೇ ಕಲ್ಲು ಹಾಕಿಕೊಂಡೆ. ನನ್ನನ್ನು ಲಗ್ನವಾಗಬಾರದಿತ್ತು "

ಹಿಂದೆ ಚಂದ್ರಮೋಹನನೂ ಇದೇ ಅರ್ಥದ ಪ್ರಶ್ನೆ ಕೇಳಿದ್ದ. ಅವನಿಗೆ ತಾನು ಕೊಟ್ಟಿದ್ದ ಉತ್ತರವೂ ಅವಳ ಜ್ಞಾಪಕಕ್ಕೆ ಬಂದಿತು. ಅದೇ ಧಾಟಿಯಲ್ಲಿ ಅವಳು ಉತ್ತರ ಕೊಟ್ಟಳು. " ಸ್ವಾಮೀ, ಲಗ್ನವಾಗುವುದೂ ಬಿಡುವುದೂ ನಮ್ಮಿಚ್ಛೆಯನ್ನು ಅವಲಂಭಿಸಿದೆಯೇ ? "

ಚಂದ್ರಮೋಹನನಂತೆ ಉತ್ತಮನೂ ನಿರುತ್ತರನಾದ.

ರೋಹಿಣಿಯೇ ಹೇಳಿದಳು "ಲಗ್ನವಾಗುತ್ತೇನೆ. ಆಗುವುದಿಲ್ಲ ಎಂದು ಹೆಣ್ಮಕ್ಕಳು ಹೇಳುವುದು ಬಲು ಕಠಿನ. ಇಂಥವನನ್ನು ಆಗುತ್ತೇನೆ ಇಂಥವನನ್ನು ಆಗುವುದಿಲ್ಲ ಎಂದು ನುಡಿಯಲೂ ಹೆಣ್ಮಕ್ಕಳು ಅಸಮರ್ಥರು ಹೆಚ್ಚಾಗಿ ಹಿರಿಯರೇ ಹೆಣ್ಮಕ್ಕಳಿಗೆ ಹುಡುಗರನ್ನು ನೋಡಿ ಗೊತ್ತು ಮಾಡುವರು. ಸ್ತ್ರೀಯರ ಮನಸ್ಸಿನೊಲವನ್ನು ಅವರು ಕೇಳುವುದಿಲ್ಲ. ಅಥವಾ ಕೇಳುವುದು ಕಡಿಮೆ. ಕೇಳಿದರೂ ಅದೊಂದು ಉಪಚಾರದ ಮಾತು. ಅಷ್ಟೆ. ಒಲ್ಲೆ ಎಂದು ಹೇಳುವ ಎದೆಗಾರಿಕೆ ಹುಡುಗಿಯರಿಗಿರುವುದಿಲ್ಲ. ಹಾಗೆ ನುಡಿದರೆ ಫಲಕಾರಿಯಾಗುವುದೂ ಕಡಿಮೆ. ಒಳ್ಳೇದಾದರೆ ಅವರ ಅದೃಷ್ಟ. ಕೆಟ್ಟದುದಾದರೆ ಅದನ್ನು ಮೌನದಿಂದ ಅನುಭವಿಸುವವರೂ ಅವರೇ"

ಉತ್ತಮ ನೆಲದ ಮೇಲೆ ಬಿದ್ದಿದ್ದ ಮಾವಿನ ಒಂದು ಹಣ್ಣೆಲೆಯನ್ನು ಹೆಕ್ಕಿ ಅದನ್ನು ಹರಿದು ಹರಿದು ಚೆಲ್ಲ ತೊಡಗಿದ. ಕೆಲವು ನಿಮಿಷಗಳಾದ ಮೇಲೆ ಹೇಳಿದ. "ರೋಹಿಣೀ ಹಿಂದೆ ಆದುದು ಆಗಿಹೋಯ್ತು. ಅದನ್ನು ಮರೆಯಲು ನಿನ್ನಿಂದ ಸಾಧ್ಯವಿಲ್ಲವೇ?"

ರೋಹಿಣಿ ಹೃದಯದ ಹೆಬ್ಬಾಗಿಲುಗಳನ್ನು ತೆರೆದು ನುಡಿದಳು "ಹೌದು ಸ್ವಾಮಿ. ಆದುದು ಆಗಿ ಹೋಯ್ತು. ನಿಜ. ಅವರು ಹಾಗಾದವರಲ್ಲ ಎಂಬ ಒಂದು ಚಿಂತೆ ಮೂಡುತ್ತಿದೆ; ಕಾಡುತ್ತಿದೆ. ಆಗ ಮತ್ತೆ ಮತ್ತೆ ಅವರ ಸ್ಮರಣೆ ಯಾಗುತ್ತದೆ."

"ಅವರು ಹೇಗಾಗಿದ್ದಾರೆ?"

"ಅಯ್ಯೋ, ಅದನ್ನು ಹೇಳಲಸಾಧ್ಯ. ನೀವು ಲೈಲಾ—ಮಜನು ಸಿನಿಮಾ ನೋಡಿದ್ದೀರಾ?"

"ನೋಡಿದ ನೆನಪಿದೆ"

"ಹಾಂ, ಆ ಮುಜ್ನುವಿನಂತಾಗಿದೆ ಅವರ ಗತಿ"

ರೋಹಿಣಿ ಲೈಲಾಳಂತೆ ಆಗಿ ಹೋಗಿದ್ದಾಳೆಂದು ಉತ್ತಮ ಭಾವಿಸಿಕೊಂಡ. ಅದರಿಂದ ಅವನಿಗೆ ಸ್ವಲ್ಪ ಭಯವೂ ಆಯ್ತು. ಆಕಾಶದ ಅಂಚಿನಲ್ಲಿ ಮುಸುಕಿದ ಕಾರ್ಮೋಡಗಳಂತೆ ಭವಿಷ್ಯದ ಭೀಕರ ಚಿತ್ರಗಳು ಅವನ ಕಣ್ಮುಂದೆ ಹಾದು ಹೋದುವು "ಮುಂದೇನು ಮಾಡುತ್ತೀ

ರೋಹಿಣೀ ? '' ಎಂದು ಅವನು ಕೇಳಿದ.

" ನಾನೇನು ಮಾಡಲಿ ಸ್ವಾಮಿ ? ಎಲ್ಲ ನಿಮ್ಮ ಕೈಯಲ್ಲಿದೆ ''

ಉತ್ತಮನಿಗೆ ಆ ಮಾತಿನ ನಿಜ ಅರ್ಥವಾಗಲಿಲ್ಲ. ಮತ್ತೆ ಅವನು ಆಲೋಚನಾಪರನಾದನು. ಏನುಹೊಳೆಯಿತೋ ಏನೋ ದೀನನಾಗಿ ಕೇಳಿದ

" ನನ್ನ ಬಗ್ಗೆ ನಿನಗೆ ಯಾವ ಭಾವನೆಯಿದೆ ರೋಹಿಣೀ? "

'' ಪತಿಭಾವನೆ ಇದೆ ಸ್ವಾಮಿ "

ಉತ್ತಮ ವಿಹ್ವಲನಾಗಿ, '' ಇದು ಸುಳ್ಳು. ಅಥವಾ ನೀನು ಮನಃಪೂರ್ವಕವಾಗಿ ಆಡಿದ ನುಡಿಯಲ್ಲ ರೋಹಿಣೀ " ಎಂದ.

'' ನೀವು ನಂಬದಿದ್ದರೆ ನಾನೇನು ಮಾಡಲಿ ? ''

'' ನಂಬುವುದು ಹೇಗೆ ರೋಹಿಣೀ ? ನಂಬಿಗೆಗೆ ಅವಕಾಶ ಎಲ್ಲಿದೆ ? ಪತಿ ಎಂದ ಬಳಿಕ ಅವನ ಮೇಲೆ ಪ್ರೇಮ ಇರುವುದು ಬೇಡವೇ ? ''

'' ಪ್ರೇಮವಿಲ್ಲವೆಂದು ಹೇಗೆ ತಿಳಿದುಕೊಂಡಿರಿ ? ''

ಅವನು ಆಶ್ಚರ್ಯದಿಂದಲೇ ಕೇಳಿದ. ''ಇನ್ನು ಹೇಗೆ ತಿಳಿದು ಕೊಳ್ಳಲಿ ? ''

ರೋಹಿಣಿ ತನ್ನ ಮುಡಿಗೆ ಚುಚ್ಚಿಕೊಂಡಿದ್ದ ಒಂದು ಗುಲಾಬಿ ಹೂವನ್ನು ತೆಗೆದು ಪದೇಪದೇ ಮೂಸಿದಳು. ಆ ಮೇಲೆ ಅದನ್ನು ಕಣ್ಣುಗಳಿಗೂ ಕೆನ್ನೆಗಳಿಗೂ ಒತ್ತಿಕೊಂಡು ಹೇಳಿದಳು. '' ಸ್ವಾಮಿ ಈ ಗುಲಾಬಿಯಲ್ಲಿ ಪರಿಮಳವಿದ್ದಂತೆ ಮನುಷ್ಯ ಜೀವದಲ್ಲೂ ಪ್ರೇಮ ಅಡಗಿದೆ. ಗುಲಾಬಿಯ ಬಣ್ಣ ಅಥವಾ ಅದರ ಎಸಳುಗಳೇ ಗುಲಾಬಿ ಯಾಗಲಾರದು. ಅದು ಅಪೂರ್ಣ. ಅದರಂತೆ ಮನುಷ್ಯನ ದೈಹಿಕ ಆಸೆಲಾಲಸೆಗಳಾಗಲೀ ಇಂದ್ರಿಯಗಳ ಚುಂಬನ, ಆಲಿಂಗನ ಮೊದಲಾದ ಚಾಪಲ್ಯಗಳಾಗಲೀ ಪ್ರೇಮವಲ್ಲ. ಪ್ರೇಮ, ಪ್ರೇಮ'' ಎಂದು ಕಿವಿಯಲ್ಲಿ ಗಾಯತ್ರಿಯಂತೆ ಮಂತ್ರ ಪಠಿಸಿದರೆ ಪ್ರೇಮ ಹರಿಯಲಿಲ್ಲ. ಇವೆಲ್ಲ ಪ್ರೇಮದ ಚಿಹ್ನೆ ಅಥವಾ ಚೇಷ್ಟೆಗಳು. ಹೊರತು ಪ್ರೇಮವೇ ಅಲ್ಲ. ಆ ಚೇಷ್ಟೆಗಳೇ ಪ್ರೇಮವಾಗಿದ್ದರೆ ತಾಯಿ, ಅಕ್ಕ, ತಂಗಿ, ಮಗಳು, ಸೊಸೆ, ನಾದಿನಿ, ಮೊದಲಾದವರನ್ನು ಪ್ರೀತಿಸಲು ಶಕ್ಯವೇ ಇಲ್ಲ ಜಗತ್ತಿನಲ್ಲಿ. ಪ್ರೇಮ ದಿವ್ಯ ಮತ್ತು ಅಕಲಂಕ. ಅದು ಎಂದೂ ದುಃಖದಾಯಕವಲ್ಲ. ತಾಪ ಪಾಪ

ಗಳೂ ಅದನ್ನು ಸೋಂಕಲಾರವು. ಅದರ ಚೇಷ್ಟೆಗಳಿಂದಲೇ ನಾನಾ ದುಃಖ."

ರೋಹಿಣಿಯ ಮಾತುಗಳನ್ನು ಕೇಳುತ್ತ ಹೋದಂತೆ ಉತ್ತಮ ಪುಲಕಿತನಾದ. ಕಡೆಗಣ್ಣಿನಿಂದ ಕೆಲವು ಹನಿಗಳು ಜಾರಿದುವು. "ಜಗತ್ತು ಇದೇ ಸುಖವೆಂದು ಬಯಸುತ್ತಿದೆಯಲ್ಲ ರೋಹಿಣೀ?" ಎಂದು ಅವನು ನುಡಿದ.

"ಹಾಗೆ ಬಯಸಿದರೆ ನಾನು ಅಪರಾಧಿನಿ" ಎಂದು ರೋಹಿಣಿ ಗದ್ಗದಿತ ಕಂಠದಿಂದ ಉತ್ತರ ಕೊಟ್ಟಳು. ಸ್ವಲ್ಪ ತಡೆದು ಮತ್ತೆ ನಿಲ್ಲಿಸಿದ್ದ ವಾಕ್ಯ ಸರಣಿಯನ್ನು ಪುನಃ ಎತ್ತಿಕೊಂಡಳು. "ಹಾಗಿದ್ದರೆ ನಾನು ದ್ರೋಹಿ. ನಿಮ್ಮ ಸುಖಕ್ಕೆ ಕಲ್ಲು ಚೆಲ್ಲಿದವಳು. ನನ್ನ ತಪ್ಪನ್ನು ಒಪ್ಪಿಕೊಳ್ಳುತ್ತೇನೆ. ಕ್ಷಮಿಸುವುದೂ ಶಿಕ್ಷಿಸುವುದೂ ನಿಮ್ಮನ್ನೇ ಕೂಡಿದೆ. ಅದಕ್ಕೇ "ನಾನೇನು ಮಾಡಲಿ? ಎಲ್ಲ ನಿಮ್ಮಕೈಯಲ್ಲಿದೆ" ಎಂದು ಆಗ ನಾನು ಹೇಳಿದುದು"

"ನಾನು ಕ್ಷಮಿಸದಿದ್ದರೆ..."

ರೋಹಿಣಿಯ ಕಣ್ಣೊಳಗಿನ ನೀರು ಅಲ್ಲೇ ಇಂಗಿ ಹೋಯಿತು. ಉತ್ತಮನ ಮೋರೆಯನ್ನು ದಿಟ್ಟಿಸುತ್ತಾ ಹೇಳಿದಳು. "ಕ್ಷಮಿಸಿರಿ ಎಂದು ನಾನು ಕೇಳುವುದಿಲ್ಲ. ಹಿಂದೊಮ್ಮೆ ಕೂಡಾ ತಮಗೆ ತಿಳಿಸಿದ್ದೆ ಸ್ವಾಮೀ. ಶಿಕ್ಷೆಗೆ ಸದಾಸಿದ್ಧಳೆಂದು ಹೇಳಿದ್ದೇನೆ. ಮನೆಯ ಬಾವಿಯಲ್ಲಿ ಇನ್ನೂ ನೀರಿದೆ. ಸಂಪೂರ್ಣ ಆರಿ ಹೋಗಿಲ್ಲ."

"ರೋಹಿಣೀ, ರೋಹಿಣೀ" ಎಂದು ಉತ್ತಮ ಮುಂದೆ ಜಿಗಿದು ಅವಳ ಬಾಯಿಗೆ ಕೈ ಹಿಡಿಯಲು ಯತ್ನಿಸಿದ. ಅವಳು ಅವನ ಪಾದಗಳಲ್ಲಿ ಮಸ್ತಕವನ್ನಿಟ್ಟು ರೋದಿಸಿದಳು. ಬಲವಾದ ಪೆಟ್ಟುಗಳನ್ನು ತಿಂದ ಮಕ್ಕಳಂತೆ ಬಿಕ್ಕಿ ಬಿಕ್ಕಿ ಬಿಸುಸುಯ್ಯುತಿದ್ದಳು. ಉತ್ತಮ ಅವಳ ತಲೆ ಮತ್ತು ಬೆನ್ನುಗಳ ಮೇಲೆ ಕೈ ಆಡಿಸುತ್ತ ಕರುಣೆಯ ಮಾತುಗಳನ್ನಾಡುತಿದ್ದ.

# ಹನ್ನೊಂದನೆಯ ಅಧ್ಯಾಯ

ಮನುಷ್ಯ ಅತ್ಯಂತ ದುಃಖಾತಿರೇಕದಿಂದ ತೊಳಲಿ ಬಳಲಿದಾಗ ಇಷ್ಟಮಿತ್ರರ ಅಥವಾ ಬಂಧುಬಳಗದವರ ಮುಂದೆ ತನ್ನ ಹೃದಯವನ್ನು ತೋಡಿಕೊಳ್ಳುವುದೇ ಒಳ್ಳೇದು. ಅಳು ಸಹಿಸಲಾಗದಿದ್ದರೆ ಅತ್ತು ಬಿಡುವುದೂ ಉತ್ತಮ. ಏಕೆಂದರೆ, ಅದರಿಂದ ಅವನು ಹೊತ್ತ ದುಃಖದ ಹೊರೆಯನ್ನು ತಾತ್ಕಾಲಿಕವಾದರೂ ಇಳಿಸಿದಂತಾಗುತ್ತದೆ. ಕಣ್ಣೀರಿನೊಂದಿಗೆ ಅದು ಸ್ವಲ್ಪ ಮಟ್ಟಿಗೆ ಕರಗಿ ಹೋಗುವುದೂ ಉಂಟು. ಪ್ರಾಯಶಃ ಅದೆ ಕಾರಣದಿಂದ ಸ್ತ್ರೀಯರಿಗೆ ಉದ್ದನಾಲಿಗೆಗಳನ್ನೂ ಕಣ್ತುಂಬ ಕಂಬನಿಯನ್ನೂ ದೇವರು ದಯಪಾಲಿಸಿರುವಂತೆ ತೋರುತ್ತದೆ. ಗಂಡಸರಿಗಿಂತ ಅಧಿಕ ಸಂಕಷ್ಟ ಮತ್ತು ದುಃಖಗಳನ್ನು ತಡೆದುಕೊಳ್ಳುವ ಅವರ ಸಹನಾ ಶಕ್ತಿಯ ಗುಟ್ಟು ಅದೇ ಇರಬೇಕು. ರೋಹಿಣಿಯ ಮಟ್ಟಿಗೆ ಅದು ನಿಜ.

ಉತ್ತಮನ ಮೇಲೂ ಅದರ ಪರಿಣಾಮವಾಗಿದೆ. ಇಷ್ಟರವರೆಗೆ ಹುತ್ತದಲ್ಲಿ "ಏನಿದೆ? ಏನಿಲ್ಲ?" ಎಂದವನು ಚಿಂತಾಕ್ರಾಂತನಾಗಿದ್ದ. ಅದರ ಸಮೀಪ ತೆರಳಲು ಅಂಜಿಕೆ. ಕಲ್ಲು ಹೊಡೆಯುವುದಕ್ಕೆ ಕೈ ನಡುಗುತ್ತಿತ್ತು. ಮಣ್ಣು ಕೆರೆದು, ಕಡಿದು ಹುತ್ತವನ್ನು ನೆಲಸಮ ಮಾಡುವುದಂತೂ ದೂರವೇ ಉಳಿಯಿತು. ಆದುದರಿಂದ ಅವನು ಅನಿಶ್ಚಿತ ಸ್ಥಿತಿಯಲ್ಲಿದ್ದ. ಆದರೆ, ಈಗ "ಏನಿದೆ?" ಎಂದವನಿಗೆ ಖಚಿತವಾಗಿ ಗೊತ್ತಾಗಿದೆ. ಕತ್ತಲೆ ಕರಗಿದೆ. ಹುತ್ತದ ಬಿಲಕ್ಕೆ ಪ್ರಕಾಶ ಬಿದ್ದಿದೆ. ಹಾವಿನ ನಿಜ ಸ್ವರೂಪ ದರ್ಶನವೂ ಆಗಿದೆ. ಯಾವ ಸಂಶಯವೂ ಇಲ್ಲ. ಆದುದರಿಂದ ಪರಿಸ್ಥಿತಿಯನ್ನು ಇದಿರಿಸಲು ಅವನು ಸನ್ನದ್ಧನಾಗಿದ್ದಾನೆ. ಎದೆಗೆ ಧೈರ್ಯ ಬಂದಿದೆ. ಚಿಂತೆಯ ಇಳಿಮುಖ ಕಳೆದಿದೆ. ದೊಡ್ಡಸ್ತನದ ಔದಾರ್ಯದ ಕಳೆ ತುಂಬಿದೆ. ಉತ್ತಮ ಉಲ್ಲಾಸದಿಂದಿದ್ದಾನೆ. ಮುಖ ಗಂಟಿಕ್ಕಿಕೊಂಡಿಲ್ಲ. ನಿಸ್ಸಂಕೋಚದಿಂದ ಮಾತನಾಡುತ್ತಾನೆ.

ರೋಹಿಣಿಯೂ ಮಾತು ಬೆಳೆಸಿದಳು. ಆದರೆ, ಅವರಿಬ್ಬರೇ ಇದ್ದಾಗ ಅವರ ಮಾತುಗಳೇ ಬೇರೆ. ಅಕ್ಷರದಿಂದ ಸಾಹಿತ್ಯಕ್ಕೆ ರೋಹಿಣಿ ಅವನನ್ನು ಎಳೆಯುವಳು. ಉತ್ತಮ ಸಾಹಿತ್ಯ ಕೃತಿಗಳನ್ನು ಉತ್ತಮನ ಇದಿರು ಓದುವಳು. ಭಾವಗೀತೆಗಳನ್ನು ಹಾಡುವಳು. ಸೊತ್ತು ವಿತ್ತಗಳ ಬದಲು ತತ್ವಜ್ಞಾನದ ಬೆನ್ನು ಹತ್ತುವಳು. ಅಧ್ಯಯನದಿಂದ ಅವನಿಗೂ ಆಧ್ಯಾತ್ಮಿಕ ಹುಚ್ಚು ಹಿಡಿಯಲಾರಂಭಿಸಿದೆ. ಉತ್ತಮ ಒಂದೊಂದೇ ಉನ್ನತ ಸೋಪಾನವನ್ನೇರುತ್ತಿದ್ದಾನೆ. ಅವನ ಮನೋವಿಕಾರಗಳು ದಿನ ದಿಂದ ದಿನಕ್ಕೆ ಕಡಿಮೆಯಾಗತೊಡಗಿವೆ. ತುಂಬಿದ ಕೊಡದಂತೆ ಪ್ರೇಮ ಅವನ ಎದೆಯನ್ನು ತುಂಬಿದೆ. ಪ್ರೇಮ ಚೇಷ್ಟೆಗಳ ರೂಪದಲ್ಲಿ ಅದು ಕಾಮವಾಗಿ ತುಳುಕಿಲ್ಲ. ರೋಹಿಣಿ ಅವನ ಬಳಿಯಲ್ಲಿ ಬಂದು ಕುಳಿತರೂ ಅವನಿಗೇನೂ ಅನ್ನಿಸುವುದಿಲ್ಲ. ಅವನ ಕೈ ಮೈ ಮುಟ್ಟಿ ಅವಳು ಮಾತ ನಾಡಿದರೂ ಸ್ಫುರಣ ಹೊಂದಲಾರ. ಪುರುಷೋತ್ತಮ ಸಂಯಮಶೀಲ ನಾಗಿದ್ದಾನೆ.

ಆದರೆ ಚಂದ್ರಮೋಹನ? ಅವನ ಮನಸ್ಸು ಕದಡಿದ ಕೆರೆ. ಪ್ರಣಯ ಭಂಗದಿಂದುಂಟಾದ ಹತಾಶೆಯ ಮದ್ದಾನೆ ಆ ಕೆರೆಯಲ್ಲಿಳಿದು ಜಲ ಕ್ರೀಡೆ ಆಡಿ ಕೆಡಿಸಿದೆ. ತಿಳಿ ನೀರು ಕಲಕಿ ಹೋಗಿದೆ. ಮತ್ತು ಕೆಸರು ನೀರಾ ಗಿದೆ. ತಳದಲ್ಲಿದ್ದ ಕಸ ಕಡ್ಡಿಗಳು ಕೆಂಪು ನೀರಿನಲ್ಲಿ ತೇಲುತ್ತಿವೆ. ಅಷ್ಟೇ ಅಲ್ಲ, ತಳದಲ್ಲಿದ್ದ ವಿಚಿತ್ರ ಪ್ರಾಣಿಗಳೂ ಎದ್ದಿವೆ. ಮತ್ತು ಮೇಲಕ್ಕೆ ಬಂದು ಬಾಯ್ದೆರೆದು ಅತ್ತಿತ್ತ ಸುಳಿಯುತ್ತಿವೆ ಕೆಸರು ಮಣ್ಣಿನ ಅಣುಕಣ ಗಳು ಇಂಗಿ ತಳವೂರಿದರೆ ನೀರು ತಿಳಿಯಾಗುವುದು. ತಿಳಿ ನೀರು ಕೆರೆಗೆ ಭೂಷಣ. ಮತ್ತು ಅದು ಪ್ರಯೋಜನಕಾರಿ. ಕೊಳಕು ನೀರು ಎಮ್ಮೆ ಕೋಣಗಳ ಹೊರಳಾಟಕ್ಕೆ ಯೋಗ್ಯ. ನಾನಾ ಕ್ರಿಮಿ ಕೀಟ ರೋಗಾಣು ಗಳಿಗೆ ಆಶ್ರಯ ಸ್ಥಾನವಾಗಿಯೂ ಪರಿಣಮಿಸುವದು. ನೀರು ತಿಳಿಯಾಗ ಬೇಕು ಮತ್ತು ಬೇಗನೇ ಆಗಬೇಕೆಂದು ರೋಹಿಣಿಯ ಆಲೋಚನೆ. ಏನು ಮಾಡಲಿ? ಹೇಗೆ ಮಾಡಲಿ? ಎಂದು ಅವಳು ಚಿಂತಿಸುತಿದ್ದಾಳೆ. ಅವನ ಮನಸ್ಸಿನೊಳಗೆ ಹೊಕ್ಕು ಒಂದೊಂದೇ ಪದರನ್ನು ತೆಗೆದು ಅವಳು ಇಣಿಕಿ ನೋಡುತಿದ್ದಾಳೆ. ಅವನು ಆಡಿದ ನುಡಿಗಳೆಲ್ಲವನ್ನೂ ಸ್ಮರಿಸಿಕೊ

ಳ್ಳುವಳು. ಅವನ ಆಶೆ ಆಕಾಂಕ್ಷೆಗಳ ಕಲ್ಪನೆ ಕಟ್ಟುವಳು. ಹೀಗೆ ಯೋಚ ನಾಪರಳಾದಾಗ, "ಕಾಲೇಜಿಗೆ ತೆರಳಬೇಕೆಂದಾಸೆ ನನಗೆ ರೋಹಿಣೀ ವರದಕ್ಷಿಣೆ ಒಂದೆರಡು ಸಾವಿರ ತೆಗೆದುಕೊಳ್ಳಬೇಡ. ಬಹಳ ಇರಲಿ" ಎಂದು ಅವನಾಡಿದ್ದ ಮಾತು ನೆನಪಿಗೆ ಬಂದಿತು. ಮೋಹನ ಮತ್ತೆ ಕಾಲೇಜಿಗೆ ತೆರಳುವುದೇ ಯೋಗ್ಯ. ಅದರಿಂದ ಅವನ ಮನಸ್ಸಿನ ಅನಿಶ್ಚಿತ ಸ್ಥಿತಿ ತಪ್ಪುವುದು. ಈಗ ಕೈ ಮೈ ಬುದ್ಧಿಗಳಿಗೆ ಕೆಲಸವೇ ಇಲ್ಲ. ಸೋಮಾ ರಿತನ ತುಂಬಿದೆ. ಆದುದರಿಂದ ಹಿಂದಿನ ಮುಂದಿನ ಘಟನೆಗಳನ್ನು ನೆನೆಸು ವುದೊಂದೇ ಆಗಿದೆ. ಕಾಲೇಜಿಗೆ ತೆರಳಿದರೆ ಅವನ ಲಕ್ಷ್ಯ ಅತ್ತ ಹೊರಳು ತ್ತದೆ. ಪಾಸಾದರೆ ನೌಕರಿಯೂ ಸಿಗುವ ಸಂಭವವಿದೆ. ಅವನ ಜೀವನದಲ್ಲಿ ಸುಧಾರಣೆಯಾದೀತು ಅವನ ಭವಿಷ್ಯ ಜೀವನ ಬದಲಾದೀತು. ಮೋಹ ನನೂ ಸುಖಿಯಾದಾನು. ರೋಹಿಣಿ ಅದನ್ನು ಮನಃಪೂರ್ವಕವಾಗಿ ಬಯ ಸುತ್ತಾಳೆ. ಅದಕ್ಕಾಗಿ ಸಹಾಯ ಹಸ್ತ ನೀಡಲು ಅವಳ ಇಚ್ಛೆ. ಯಾವ ತ್ಯಾಗಕ್ಕೂ ಅವಳು ಸಿದ್ಧಳು.

ಒಂದು ಆದಿತ್ಯವಾರ ನಾರಾಯಣರಾಯರು ಮಗನೊಂದಿಗೆ ಬ್ಯಾಂಕಿ ನಲ್ಲಿದ್ದ ಹಣ, ವಿಮಾ ಹಣ ಮೊದಲಾದವುಗಳ ಬಗ್ಗೆ ಮಾತುಕತೆ ನಡೆಸು ದ್ದರು. ಅವರ ಮಾತು ಮುಗಿಯುವ ಹೊತ್ತಿಗೆ ರೋಹಿಣಿ ಆ ಕೋಣೆಗೆ ಬಂದಳು. ರೋಹಿಣಿ ಎಂದೆಂದೂ ಹಾಗೆ ಬರುವವಳಲ್ಲ. ಅದರಿಂದ ನಾರಾ ಯಣರಾಯರಿಗೇ ಆಶ್ಚರ್ಯವಾಗಿ ಅವಳ ಕಡೆ ನೋಡಿದರು. ಅವಳು ಬಂದುದಕ್ಕೆ ಅವರ ಆಕ್ಷೇಪವೇನೂ ಇಲ್ಲ. ಆದರೆ ಆಶ್ಚರ್ಯದ ನೋಟ ದಿಂದ ನೋಡಿದರು. ಅಷ್ಟೆ. ಅವರ ನೋಟವೇ ರೋಹಿಣಿಗೆ ಪ್ರಶ್ನೆಯ ಮಾತಾಯಿತು. ಮತ್ತು ಅವಳೇ "ಮಾವಯ್ಯನವರೇ ಒಂದು ಕೆಲಸವಿತ್ತು ಅದಕ್ಕೆ ಬಂದೆ" ಎಂದುತ್ತರವಿತ್ತಳು. ಉತ್ತಮ ಅಲ್ಲಿಂದೇಳಲೆತ್ನಿಸಿದ. "ಇರ್ರಿ. ನೀವಿದ್ದರೆ ನನಗೇನೂ ಅಡ್ಡವಿಲ್ಲ" ಎಂದು ಹೇಳಿ ಅವನನ್ನು ತಡೆದಳು.

"ಏನು ಮಗು, ಏನದು ಹೇಳು ?" ಎಂದು ನಾರಾಯಣರು ಕೇಳಿ ಲೋಡಿಗೊರಗಿದರು.

"ನೀವು ಹಣದ ಲೆಕ್ಕಮಾಡುತಿದ್ದಂತೆ ತೋರುತ್ತದೆ. ಎಲ್ಲ ಹಣ

ವನ್ನೂ ನಿಮ್ಮ ಮಗರಾಯರಿಗೇ ಕೊಟ್ಟುಬಿಡಬೇಡಿ. ಅವರು ನಿಮ್ಮ ಏಕಮಾತ್ರ ಮಗುವಲ್ಲ. ನಮ್ಮ ನಾದಿನಿಯೂ ನಿಮ್ಮಮಗುವೇ. ಅವರಿಗೂ ಸ್ವಲ್ಪ ಇರಲಿ."

ನಾರಾಯಣರಾಯರು ನಕ್ಕರು ರೋಹಿಣಿ ಪುನಃ ಹೇಳಿದಳು. "ನಾನೂ ಹೊರಗಿನವಳಲ್ಲ. ನನಗೂ ಒಂದು ಸಮಪಾಲು ಬೇಕು"

ಅವಳ ಮಾವಯ್ಯ ಗಹಗಹಿಸಿ ನಗತೊಡಗಿದರು.

ಅವರ ನಗು ನಿಂತ ಮೇಲೆ ರೋಹಿಣಿ ಕೇಳಿದಳು. "ಮಾವಯ್ಯ ನನಗೆ ಇನ್ನೂ ಒಬ್ಬಿಬ್ಬರು ಮೈದುನಂದಿರು ಇರುತ್ತಿದ್ದರೆ ನೀವು ಅವರನ್ನು ಓದಿಸುತ್ತಿದ್ದಿಲ್ಲವೇ. ?"

"ಓದಿಸುತಿದ್ದೆ ಮಗೂ"

"ಸರಿ. ನನಗೆ ಈಗ ಅಂತಹ ಮೈದುನನೊಬ್ಬ ಇದ್ದಾರೆ ಅವರಿಗೆ ಹಿಂದಿಲ್ಲ ಮುಂದಿಲ್ಲ. ಕಷ್ಟದಿಂದ ಕಲಿತವರು. ಆದರೆ ದುರದೃಷ್ಟದಿಂದ ಪರೀಕ್ಷೆಯಲ್ಲಿ ಉತ್ತೀರ್ಣರಾಗಲಿಲ್ಲ. ಇನ್ನೂ ಕಲಿಯಬೇಕೆಂದಾಸೆಯಿದೆ ಅವರಿಗೆ. ಅದು ಕೈಗೂಡಲಿಲ್ಲ. ಆದರಿಂದ ಮನಸ್ಸಿಗೆ ನೋವಾಗಿದೆ. ದುಃಖದಿಂದ ಅವರ ವಿವೇಕವೇ ಕರಗಿ ಹೋಗುತ್ತಿದೆ. ತಲೆಯಲ್ಲಿ ಕೆಟ್ಟ ವಿಚಾರಗಳು ಸುಳಿಯತೊಡಗಿವೆ. ಹಗಲಿರುಳು ಬೀದಿ, ಗುಡ್ಡ, ದಿನ್ನೆಗಳಲ್ಲಿ ಅಲೆಯುತ್ತಿರುವರು. ಹೀಗೇ ಆದರೆ ಆ ಜೀವ ಹಾಳಾಗುವುದು ನಿಶ್ಚಯ. ಅದಕ್ಕೆ ಬಹಳ ಕಾಲ ಹಿಡಿಯಲಾರದು. ನಾನವರನ್ನು ಚೆನ್ನಾಗಿ ಬಲ್ಲೆ. ಚಿಕ್ಕಂದಿನಿಂದ ಗೊತ್ತು. ಸಹಾಯ ಮಾಡಲು ನನ್ನಾಶೆ. ಮತ್ತೇನೂ ಇಲ್ಲ. ತಪ್ಪಾದರೆ ಕ್ಷಮಿಸಿರಿ ಎಂದು ಬೇಡಿಕೊಳ್ಳುತ್ತೇನೆ."

ರೋಹಿಣಿ ಕೈ ಜೋಡಿಸಿದಾಗ ನಾರಾಯಣರಾಯರು ಪ್ರೀತಿಯ ಸಿಟ್ಟಿನಿಂದ ಕೇಳಿದರು. "ನೀನು ಇಷ್ಟರವರೆಗೆ ನನಗೆ ಯಾಕೆ ಹೇಳಲಿಲ್ಲ?"

ಅವಳು ತಲೆ ತಗ್ಗಿಸಿದಳು.

ಅವರು ಯಾರು? ಏನು? ಎಂಬ ವಿವರವನ್ನು ನಾರಾಯಣರಾಯರು ಕೇಳದೆ "ರೋಹಿಣೀ, ನಮ್ಮನೆಯಲ್ಲೇ ಇರಲಿ. ಇಲ್ಲೇ ಊಟ ಮಾಡಿ ಕಾಲೇಜಿಗೆ ಹೋಗಲಿ. ತಿಳಿಸಿಬಿಡು" ಎಂದು ನುಡಿದರು.

"ಮಾವಯ್ಯ, ಅವರಿಗೆ ಇರಲು ಮನೆಯಿದೆ."

" ಹಾಗೇನು? ಹಾಗಿದ್ದರೆ ಟರ್ಮ್ ಫೀ ತುಂಬುವ ಕಾಲಕ್ಕೆ ಬಂದು ತೆಗೆದುಕೊಂಡು ಹೋಗಲಿ. ನಿನ್ನ ಹತ್ತಿರವೇ ಕೊಟ್ಟುಬಿಡುತ್ತೇನೆ. ನೀನೇ ಮುಟ್ಟಿಸು. ''

ರೋಹಿಣಿ ಆನಂದಭರಿತಳಾಗಿ ಮಾವಯ್ಯನವರಿಗೆ ಮನಸ್ಸಿನಲ್ಲೇ ಸಾಷ್ಟಾಂಗ ನಮಸ್ಕಾರ ಮಾಡಿದಳು. ಗೆಲುವಿನ ಮುಖದಿಂದ ಕೋಣೆಯಿಂದ ಹೊರಬಿದ್ದಳು.

ಉತ್ತಮ ಮರುದಿನ ಆಫೀಸಿಗೆ ಹೊರಟಾಗ ರೋಹಿಣಿಯೂ ಅವನೊಂದಿಗೆ ಗೇಟಿನ ಹೊರಗೆ ಬಂದು, " ಸಂಜೆ ಸ್ವಲ್ಪ ಬೇಗನೇ ಬರುತ್ತೀರಾ ?'' ಎಂದು ಕೇಳಿದಳು.

" ಯಾಕೆ ? "

" ನನಗೆ ಸಾಧನಕೇರಿ ವರೆಗೆ ಹೋಗಿ ಬರಬೇಕಾಗಿದೆ. ''

" ಆದಕ್ಕೆ ನಾನೇಕೆ ? "

" ನೀವೂ ನನ್ನೊಂದಿಗೆ ಬಂದರೆ ಒಳ್ಳೇದು. "

" ಛೇ, ನೀನೇ ಹೋಗಿ ಬಾ '' ಎಂದು ಹೇಳಿ ಅವನು ಹೊರಟು ಹೋದ.

ಆದರೆ ಅವಳು ಸಾಧನಕೇರಿ ವರೆಗೆ ತೆರಳುವ ಅವಶ್ಯಕತೆಯೇ ಇರಲಿಲ್ಲ. ಹೋಗಬೇಕೆಂದು ಹೊರಟು ಬಂದಾಗ ಟಾರ್ ರಸ್ತೆಯ ಬದಿ ಹುಣಿಸೆ ಮರದ ಬುಡದಲ್ಲೇ ಮೋಹನನನ್ನು ಕಂಡಳು. ಅವನ ದೃಷ್ಟಿ ಸುಖ ಸಾಗರ ಬಂಗಲೆಯ ಕಡೆ. ತಲೆಗೂದಲು ಕೆದರಿ ಹಣೆಯ ಮೇಲೆ ಕೆನ್ನೆಗಳ ಮೇಲೆ ಬಿದ್ದಿದೆ. ಗಡ್ಡ ಅರ್ಧ ಇಂಚು ಬೆಳೆದಿದೆ. ಅವನ ಇಜಾರ, ಅಂಗಿ; ನೆಕ್‌ಟೈಗಳ ಮೇಲಿಂದ ದೂರದಿಂದಲೇ ರೋಹಿಣಿಗೆ ಗುರುತು ಹತ್ತಿತು. ಆದರೆ ಸಮೀಪ ಬಂದರೂ ಮೋಹನ ಅವಳನ್ನು ನೋಡಲಿಲ್ಲ. ಮಾತನಾಡಿಸಲಿಲ್ಲ. ಅವಳೇ ಕರೆದಳು. " ಮೋಹನ್. ಮೋಹನ್ "

" ಹಾಂ, ಹಾಂ, ಯಾರು ? '' ಎಂದು ಹಾರಿಬಿದ್ದವನಂತೆ ಕೇಳಿದ.

" ನಾನು ಮೋಹನ್ "

" ನೀನೇ ? ಓಹೋ, ಹೌದು. ಹೌದು "

" ನೀವು ನೋಡಲಿಲ್ಲವೇ ಮೋಹನ್ ? ''

"ಈಗ ನೋಡಿದೆ. ಮೊದಲು ಗೊತ್ತಾಗಲಿಲ್ಲ. ಯಾರೋ ಇರಬೇಕೆಂದು ಕಣ್ಮುಚ್ಚಿ ನಿಂತಿದ್ದೆ."

"ಇರಲಿ. ನಿಮಗೊಂದು ಶುಭ ಸಮಾಚಾರ ತಿಳಿಸಲು ಹೊರಟು ಬಂದಿದ್ದೇನೆ ಮೋಹನ್"

"ಶುಭ ಸಮಾಚಾರ? ಏನು, ರೋಹಿಣಿ ಗಂಡು ಮಗು ಹಡೆದಳೆ?"

ಆ ಪ್ರಶ್ನೆಯಿಂದ ರೋಹಿಣಿಗೆ ಸಿಟ್ಟು ಬಂದಿತು. ಸ್ವಲ್ಪ ಬೇಸರವೂ ಆಯ್ತು. ಏನೋ ಹೇಳಬೇಕೆಂದು ಬಾಯಿ ತೆರೆದಳು. ಮತ್ತೆ ನಾಲಿಗೆ ಬಿಗಿ ಹಿಡಿದು ತೆಪ್ಪಗಾದಳು. ಮೋಹನನೇ ಅರೆಕ್ಷಣ ಕಳೆದ ಬಳಿಕ ಹೇಳಿದ. "ಅಲ್ಲಲ್ಲ, ತಪ್ಪಾಯ್ತು. ನನ್ನ ಲಗ್ನದ ವರ್ತಮಾನವಿರಬೇಕು. ಅಲ್ಲವೇ? ನಿನಗಿಂತ ಸುಂದರಿಯರಾದ ಸ್ತ್ರೀಯರಿದ್ದಾರೆಂದು ನೀನೇ ಮೊನ್ನೆ ಮೊನ್ನೆ ಹೇಳಿದ್ದ ನೆನಪಿದೆ. ಮತ್ತೆ ಎಲ್ಲಾದರೂ ನೋಡಿದೆಯಾ?"

"ನೋಡಿದ್ದೇನೆ."

"ಚೆನ್ನಾಗಿರುವಳೇ?"

"ಹುಂ"

"ರೊಕ್ಕ?"

"ಅದೂ ಇದೆ. ನೀವು ಮಾತ್ರ ಮತ್ತೆ ಕಾಲೇಜಿಗೆ ತೆರಳಬೇಕು. ನಿಮ್ಮನ್ನು ಓದಿಸುತ್ತಾರಂತೆ ಮೋಹನ್"

ಈಗ ಮೋಹನನ ಮೋರೆಯೇ ಸಿಟ್ಟಿನಿಂದ ಗಂಟಿಕ್ಕಿತು. ಅವನು ಉತ್ತರ ಕೊಡದೆ ಡಾರ್ ರಸ್ತೆಗೆ ಇಳಿದು ಪೇಟೆಯ ಕಡೆ ಹೊರಟ. "ನಿಲ್ಲಿರಿ ನಿಲ್ಲಿರಿ. ನಾನೂ ಬರುತ್ತೇನೆ" ಎಂದು ಹೇಳುತ್ತ ರೋಹಿಣಿಯೂ ಹಿಂಬಾಲಿಸಿದಳು. ಅವನೊಂದಿಗೇ ರೋಹಿಣಿ ನಡೆದು ಹೋದಳು. ಮೋಹನ ಒಮ್ಮೆಯೂ ಅವಳನ್ನು ಕಣ್ಣೆತ್ತಿ ನೋಡಲಿಲ್ಲ. ಕೆಲವು ಹೆಜ್ಜೆಗಳನ್ನಿಕ್ಕಿದ ಮೇಲೆ ರೋಹಿಣಿಯೇ ಪ್ರಶ್ನಿಸಿದಳು. "ಹೀಗೇಕೆ ಮಾಡುತ್ತೀರಿ ಮೋಹನ್?"

"ಏನು ಮಾಡುತ್ತೇನೆ.?"

"ಒಂದು ಮಾತಿಂದ ಕೂಡಲೇ ಸಿಟ್ಟಿಗೆದ್ದುಕೊಳ್ಳುತ್ತೀರಿ"

ಅದಕ್ಕೆ ಉತ್ತರವಿಲ್ಲ.

"ವಿನೋದದ ಮಾತುಗಳನ್ನಾಡಿದಾಗ ಆ ರೀತಿ ಸ್ವೀಕರಿಸದೆ ಗಂಭೀರರಾಗುತ್ತೀರಿ. ಗಂಭೀರ ವಿಚಾರಗಳು ನಿಮಗೆ ನಗುವಂತಹ ಕ್ಷುಲ್ಲಕ ಸಂಗತಿಗಳಾಗುತ್ತವೆ. ನನಗೆ ಅರ್ಥವಾಗುವದಿಲ್ಲ. ದೇವರೇ" ಎಂದು ರೋಹಿಣಿ ನುಡಿದು ಹಣೆಗೆ ಕೈ ತಟ್ಟಿಕೊಂಡಳು.

ಮೋಹನ ಹೇಳಿದ. "ಚಂದ್ರನಿಗೆ ಶಾಪ ತಟ್ಟಿದೆ ರೋಹಿಣೀ. ಅದಕ್ಕೇ ಹೀಗಾಗಿದ್ದಾನೆ. ಜೀವನ ಕ್ಷಯಿಸುತ್ತಿದೆ."

"ಶಾಪಕ್ಕೆ ಪರಿಹಾರವೂ ಇದೆ ಮೋಹನ್. ಕ್ಷಯ ಸ್ವಲ್ಪ ಕಾಲ. ಮತ್ತೆ ಅಕ್ಷಯ."

"ಈ ಜನ್ಮದಲ್ಲಿಲ್ಲ" ಎಂದು ಮೋಹನ ನಿಟ್ಟುಸಿರಿಟ್ಟ.

"ಯಾಕಿಲ್ಲ ಮೋಹನ್? ಭೂಮಿ ನಡುಗಿತೇ? ಆಕಾಶ ಕಳಚಿ ಬಿದ್ದಿತೇ? ಸಾಗರದ ತೆರೆಗಳು ಉಕ್ಕಿ ಬಂದುವೇ? ಅಂತಹದೇನೂ ನಡೆದಿಲ್ಲ. ಎಲ್ಲ ನಮ್ಮ ನಮ್ಮ ಮನಸ್ಸಿನ ಭ್ರಾಂತಿ ಆ ಮುಸುಕನ್ನು ಕಿತ್ತೊಗೆಯಲು ಶಕ್ಯವಿದೆ. ನಾನು ಹೇಳಿದಂತೆ ಮಾಡುತ್ತೀರಾ? ನನ್ನ ಮನಸ್ಸಿನಲ್ಲೊಂದು ಆಶೆಯಿದೆ."

"ಏನದು ಆಶೆ.?"

"ನೀವು ಮತ್ತೆ ಕಾಲೇಜಿಗೆ ತೆರಳಬೇಕೆಂದು ಬಯಸುತ್ತೇನೆ ಮೋಹನ್. ನಿಶ್ಚಯವಾಗಿ. ನಾನು ವಿನೋದಕ್ಕನ್ನುವದಿಲ್ಲ."

"ಹೋ, ಹೋಗೋಣ. ಅದಕ್ಕೇನಡ್ಡಿ? ಪೈಸಾ? ಪೈಸಾ"? ಎಂದು ಮೋಹನ್ ಕೈಯ್ಯ ಹೆಬ್ಬೆರಳನ್ನು ಕಿರುಬೆರಳಿಗೆ ತಿಕ್ಕಿದ.

"ನಾನದರ ಹೊಣೆ ಹೊರುತ್ತೇನೆ ಮೋಹನ್. ಅದೇ ಶುಭ ವರ್ತಮಾನವನ್ನು ತಿಳಿಸಲು ಬಂದೆ"

"ಹಾಂ, ನಿನ್ನಲ್ಲಿ ಅಷ್ಟು ಹಣವಿದೆ?" ಎಂದು ಕುತೂಹಲದಿಂದ ಮೋಹನ ಕಣ್ಣರಳಿಸಿದ.

"ನನ್ನಲ್ಲಿಲ್ಲ. ಒಂದು ಕಾಸೂ ಇಲ್ಲ. ಇರುತ್ತಿದ್ದರೆ ಎಂದೋ ಕೊಡುತ್ತಿದ್ದೆ. ಆದರೆ ಮನೆ ನನ್ನದು. ಹಕ್ಕಿದೆ ಕೊಡಲು. ಮತ್ತೆ ಯಾರೂ ಆಕ್ಷೇಪಿಸಲಾರರು. ಆಕ್ಷೇಪಿಸುವವರೂ ಅಲ್ಲ."

ಮೋಹನ ಗಂಭೀರನಾಗಿ ಕೇಳಿದ. "ನಾನು ಯಾಕೆ ಕಲಿಯಲಿ?"

"ಎಂದರೆ? ಕಲಿಯುವುದೇದಕ್ಕೆ ಎಲ್ಲರೂ? ಕಲಿತು ಎಲ್ಲಾದರೂ ಕೆಲಸಕ್ಕೆ ಸೇರಿಕೊಂಡರೆ ಒಳ್ಳೇದು. ಕೈಯಲ್ಲಿ ನಾಲ್ಕು ದುಡ್ಡು ಬರುತ್ತದೆ"

"ಆ ಹಣ ಯಾರಿಗೆ? ಯಾರಿಗಾಗಿ ಸಂಪಾದನೆ?"

"ನಿಮ್ಮ ಹೆಂಡತಿ ಮಕ್ಕಳಿಗೆ" ಎಂದು ಹೇಳಲು ರೋಹಿಣಿ ಬಾಯಿ ತೆಗೆದಳು. ಆದರೆ ಫಕ್ಕನೇ ತಡೆದು, "ನಿಮ್ಮ ಬಂಧು ಬಳಗಕ್ಕೆ" ಎಂದಳು.

"ಹುಂ, ಹುಂ" ಎಂದು ಉಸಿರ್ಗರೆದ ಮೋಹನ. ರೋಹಿಣಿ ಅಷ್ಟಕ್ಕೆ ಬಿಡದೆ ನುಡಿದಳು. "ಬಂಧು ಬಳಗಕ್ಕೆ ಎಂದು ನಾನಂದಾಗ ಮೂಗು ಮುರಿದುಕೊಳ್ಳಬೇಕಾಗಿಲ್ಲ ಮೋಹನ್. ನಿಮ್ಮ ಅಣ್ಣನಿಗೆ, ಅತ್ತಿಗೆಗೆ, ಅವರ ಮಕ್ಕಳಿಗೆ ದೊರೆಯುತ್ತದೆ. ಅವರ ವಿದ್ಯಾಭ್ಯಾಸಕ್ಕಾಗುತ್ತದೆ. ಅವರ ಬಡತನ ಹಿಂಗುತ್ತದೆ. ನಿಮ್ಮ ಬಗ್ಗೆ ಅವರು ಇಟ್ಟುಕೊಂಡಿದ್ದ ಆಶೆ ಕೈಗೂಡಿದಂತಾಗುತ್ತದೆ. ಅವರ ಸುಖಕ್ಕಾಗಿ ನೀವು ಈ ರೀತಿಯ ತ್ಯಾಗ ಮಾಡಬೇಕು. ತ್ಯಾಗ ಜೀವನವೇ ನಿಜವಾದ ಜೀವನ. ಮಕ್ಕಳಿಗಾಗಿ ತಂದೆ ತಾಯಿ, ಬಂಧುಗಳಿಗಾಗಿ ಬಳಗದವರು, ಸತಿಗಾಗಿ ಪತಿ, ಮಿತ್ರರಿಗಾಗಿ ಮಿತ್ರರು ತ್ಯಾಗ ಮಾಡುವರು. ತ್ಯಾಗವಿಲ್ಲದ ಪ್ರೇಮವೂ ಇಲ್ಲ."

"ಹುಂ ಆಗಲಿ, ಆಗಲಿ. ಇನ್ನೂ ನಿನ್ನ ಭಾಷಣ ನಡೆಯಲಿ. ನಿಲ್ಲಿಸಬೇಡ. ನಾನು ಕೇಳುತಿದ್ದೇನೆ ರೊಹಿಣೀ. ನನಗೆ ಬೇಸರ ಬಂದಿಲ್ಲ"

ರೋಹಿಣಿ ಮಾತ್ರ ನಿಲ್ಲಿಸಿದಳು. ಮತ್ತು ರಸ್ತೆಯ ಬದಿಯಲ್ಲಿ ನಿಂತಳು. ಇದಿರಿಗೆ ಟಾಂಗಾ ರಭಸದಿಂದ ಬರುತ್ತಾ ಇದೆ. ಅವಳ ಮಾವಯ್ಯನವರೊಡನೆ ಸಂಜೆ ತಿರುಗಾಡಲು ತೆರಳುತಿದ್ದ ಜೋಶಿಯವರು ಇದಿರಿಗೆ ಕುಳಿತಿದ್ದರು. ಅವಳ ಮಾವಯ್ಯ ಟಾಂಗಾದಲ್ಲಿ ಒರಗಿರುವರು. ದೇಶಪಾಂಡೆಯವರು ಅವರನ್ನು ತಬ್ಬಿ ಹಿಡಿದುಕೊಂಡಿದ್ದಾರೆ. ಕಂಡ ರೋಹಿಣಿ "ಮಾವಯ್ಯಾ, ಏನಾಯ್ತು? ಏನಾಯ್ತು?" ಎಂದು ಕೂಗುತ್ತ ಟಾಂಗಾದ ಬೆಂಬತ್ತಿದಳು.

ದೇಶಪಾಂಡೆಯವರು ಟಾಂಗಾ ನಿಲ್ಲಿಸಿ "ದಾರಿಯಲ್ಲಿ ಮಾತ

ನಾಡುತ್ತ ನಡೆಯುತಿದ್ದಾಗ ಕಾಲು ಜಾರಿ ಬಿದ್ದರು. ನೆವಕ್ಕೆ ಕಾಲಡಿ ನೆಲದಲ್ಲಿ ಬಾಳೆಯ ಹಣ್ಣಿನ ಸಿಪ್ಪೆಯಿದ್ದಿತು. ಮನೆಗೆ ಕರೆದುಕೊಂಡು ಹೋಗುತಿದ್ದೇವೆ. " ಎಂದರು.

ನಾರಾಯಣರಾಯರು ಕೈಸನ್ನೆ ಮಾಡಿದರು. ರೋಹಿಣಿ ಅವರ ಸಮೀಪ ತೆರಳಿದಳು. "ಉತ್ತಮ'' ಎಂದು ಅವರು ಹೇಳಿದ ಹಾಗಾಯಿತು. ರೋಹಿಣಿ ಉತ್ತಮನಿದ್ದಲ್ಲಿಗೆ ಮೋಹನನನ್ನು ಕಳಿಸಿದಳು. ರಸ್ತೆಯಿಂದ ನಾರಾಯಣರಾಯರನ್ನು ಎತ್ತಿಕೊಂಡೇ ಮನೆಗೆ ಬಂದರು. ಉತ್ತಮ ಬರುವ ವರೆಗೂ ಅವರಿಗೆ ಪ್ರಜ್ಞೆಯಿತ್ತು. ಎಲ್ಲರನ್ನು ಅವರು ಗುರುತಿಸಿದರು. ಆ ಮೇಲೆ ಅವರಿಗೆ ಪ್ರಜ್ಞೆ ತಪ್ಪಿತು. ಡಾಕ್ಟರರು ಬರುವ ವರೆಗೂ ಅವರ ಪ್ರಾಣ ಉಳಿಯಲಿಲ್ಲ.

## ಹನ್ನೆರಡನೆಯ ಅಧ್ಯಾಯ

ನಾರಾಯಣರಾಯರ ಆಕಸ್ಮಿಕ ನಿಧನದಿಂದ ಎಲ್ಲರಿಗೂ ಆಶ್ಚರ್ಯವಾಗಿದೆ. ಕೇಳಿದವರು ಮೊದಲು ಅದನ್ನು ನಂಬಲೇ ಇಲ್ಲ. "ನಿನ್ನೆ ನಮ್ಮಲ್ಲಿ ಬಂದಿದ್ದರು" ಎಂದು ಕೆಲವರು ಬಾಯಿ ಅಗಲಿಸಿದರು 'ಹಾಂ, ನಿಜ? ನಿಜ?'' ಎಂದು ಅನೇಕರು ಪ್ರಶ್ನಿಸಿ, "ನಿನ್ನೆ ನಮ್ಮೊಡನೆ ಹರಟೆ ಹೊಡೆದಿದ್ದರು" ಎಂದು ನಿಟ್ಟುಸಿರುಗರೆದರು. "ಏನಾಯಿತು ಅಷ್ಟು ಬೇಗನೇ ? ಯಾವ ರೋಗವೂ ಇದ್ದಂತೆ ಕಾಣಲಿಲ್ಲ. ಹೃದ್ರೋಗ ಎಷ್ಟು ಆಕಸ್ಮಿಕವಪ್ಪಾ" ಎಂದು ಎಲ್ಲರೂ ಅನ್ನುವವರೇ. ಅವರ ಗುರುತು ಪರಿಚಯ, ಸ್ನೇಹ ಸಹವಾಸವುಳ್ಳವರೆಲ್ಲರೂ ಅವರ ಗುಣಾತಿಶಯವನ್ನು ಹೊಗಳಿದರು. ಅವರ ಸಂಗಾತಿಗಳಾದ ಜೋಶಿ, ದೇಸಾಯಿ, ದೇಶಪಾಂಡೆ ಮೊದಲಾದ ಮುದುಕರಿಗೆ ನಾರಾಯಣರಾಯರ ಗುಣ ಪ್ರಶಂಸೆ ಮಾಡಿದಷ್ಟು ತೃಪ್ತಿಯಿಲ್ಲ. "ಅದು ಸುಖ ಜೀವ. ತಾವು ಸ್ವತಃ ಸುಖಿ ಮಾತ್ರವಲ್ಲ, ಪರರ ಸುಖದ ಚಿಂತನೆಯನ್ನು ಮಾಡುತಿದ್ದರು. ಯಾರಿಗೂ ಕಷ್ಟಕೊಟ್ಟಿಲ್ಲ. ಪರರ ಕಷ್ಟಗಳನ್ನು ಪರಿಹರಿಸಲೂ ನೆರವಾಗುತ್ತಿದ್ದರು. ಆದುದರಿಂದಲೇ ದೇವರು

ಅವರಿಗೆ ಸುಖಮರಣವನ್ನು ಕೊಟ್ಟ" ಎಂದು ಒಮ್ಮೆ ಹೇಳುವರು. "ಅವರಿಗಿನ್ನೇನಾಗಬೇಕು? ಹಾಲುಗೂಸುಗಳೇನೂ ಇಲ್ಲ. ಎಲ್ಲರಿಗೂ ಲಗ್ನವಾಗಿದೆ. ಮೊನ್ನೆಮೊನ್ನೆ ಮಗಳ ಮನೆಗೆ ತೆರಳಿ ಒಂದು ವಾರ ಇದ್ದು ಬಂದಿದ್ದಾರೆ. ಸಾತಾರಾದಲ್ಲಿದ್ದ ಮಗನೂ ಇಲ್ಲೇ ಬಂದ. ಮಗನ ಕಣ್ಣೆದಿರೇ ಪ್ರಾಣಬಿಟ್ಟರು. ಅದಕ್ಕೇ ಅವರು ಪುಣ್ಯ ಪುರುಷರೆಂದು ನಾನು ಹೇಳಿದುದು. ಎಲ್ಲರಿಗೂ ಅಂತಹ ಭಾಗ್ಯ ದೊರೆಯುವುದಿಲ್ಲ" ಎಂದು ಮತ್ತೊಬ್ಬರು ಉದ್ಗಾರ ತೆಗೆದರು. ಮನೆಗೆ ಬಂದ ಇಷ್ಟಮಿತ್ರರು, ಬಂಧು ಬಳಗದವರು, ನಿವೃತ್ತ ಅಧಿಕಾರಿಗಳು, ಸ್ತ್ರೀಯರು, ಎಲ್ಲರೂ ಅವರನ್ನು ನೆನಸಿಕೊಂಡು ಕಣ್ಣೀರ್ಗರೆದರು. ಕೆಲವರಿಗೆ ಅವರ ಭೌತಿಕ ಶರೀರದ ಕೊನೆಯ ದರ್ಶನ ಲಭಿಸಿತು. ಕೆಲವರಿಗೆ ಲಭಿಸಲಿಲ್ಲ. ನಾಗವೇಣಿಗೂ ಆ ಪುಣ್ಯವಿರಲಿಲ್ಲ. ಹಣೆಹಣೆ ಬಡಿದುಕೊಂಡು ಅವಳು ತನ್ನ ಹಣೆಬರಹವನ್ನು ಹಳಿದುಕೊಂಡಳು. "ಸುಖಸಾಗರ" ಶೋಕಸಾಗರವಾಗಿ ಪರಿಣಮಿಸಿತು.

ರೋಹಿಣಿ ಶೋಕಾತಿಶಯದಿಂದ ಹುಚ್ಚಿಯಂತಾಗಿದ್ದಾಳೆ. ದಿನಂಪ್ರತಿ ನೂರಾರು ಸಲ ನಾರಾಯಣರಾಯರು "ರೋಹಿಣೀ, ರೋಹಿಣೀ'' ಎಂದು ಕರೆಯುತಿದ್ದರು. ಬೆಳಗಿನ ಜಾವಕ್ಕೆ ಅವಳು ಸ್ಟೋವ್ ಹಚ್ಚಿದಾಗಲೇ "ರೋಹಿಣೀ" ಎಂದು ಅವರ ಉದಯರಾಗ ಆರಂಭವಾಗುತ್ತದೆ. ಸಂಜೆ ಗಾಳಿ ಸವಾರಿಗೆ ಹೋದವರು ಬರುವಾಗ ಕತ್ತಲಾಗುತ್ತಿತ್ತು ಮತ್ತು ಗೇಟಿನ ಬಳಿ ಬಂದಾಗಲೇ "ರೋಹಿಣೀ" ಎಂದು ಕರೆದು ಸಂಧ್ಯಾರಾಗವನ್ನು ಎಳೆಯುತಿದ್ದರು. ಅವಳು ಓಡಿ ಬಂದು ಗೇಟಿನ ಚಿಲುಕ ತೆಗೆದು ಬಾಗಿಲು ದೂಡಿ ಅವರ ಕೈಯಲ್ಲಿದ್ದ ಕಾಯಿಪಲ್ಯದ ಚೀಲವನ್ನು ತೆಗೆದುಕೊಳ್ಳುತಿದ್ದಳು. ಅವರು ಕೂತಾಗ ನಿಂತಾಗ "ರೋಹಿಣೀ". ನೀರು ಬೇಕಾದಾಗ "ರೋಹಿಣೀ". ಪತ್ರ ಬಂದರೆ ಅದನ್ನು ಓದಬೇಕು ರೋಹಿಣಿ. ಹಾಲಿನ ಲೆಕ್ಕ, ಮೊಸರಿನ ಲೆಕ್ಕ, ಅಗಸನ ಲೆಕ್ಕ, ವಿದ್ಯುಚ್ಛಕ್ತಿಯ ಲೆಕ್ಕ, ಎಲ್ಲ ಲೆಕ್ಕ ಮಾಡಿ ಕೊಡಬೇಕು ಅವಳೇ. ರೋಹಿಣಿ ಅವರ ಜೀವಕ್ಕೇ ಅಂಟಿಕೊಂಡಂತಿದ್ದಳು.

ಈಗಲೂ "ರೋಹಿಣೀ, ರೋಹಿಣೀ" ಎಂದು ಅವರು ಕರೆಯುವ

ಮೃದು ಮಧುರ ಸ್ವರ ಅವಳಿಗೆ ಕೇಳುತ್ತಿದೆ. ಅವರು ಅಗಲಿ ಹೋದಂತೆಯೇ ಅವಳಿಗೆ ಅನ್ನಿಸುವದಿಲ್ಲ. ಮುಂಜಾನೆ ಸುಪ್ರಭಾತದ ಹೊತ್ತಿನಲ್ಲಿ ಅವರ ಸ್ಮರಣೆಯಾಗುತ್ತದೆ. ಸಂಜೆ ಅಂಗಳಕ್ಕೆ ಬಂದಾಗ ಅವರು ಊರುಗೋಲು ಹಿಡಿದುಕೊಂಡು ನಡೆದು ಬಂದಂತೆ ಕಾಣುತ್ತದೆ. ಅವರ ಕೋಣೆಗೆ ಕಾಲಿಡಲು ಅವಳಿಗೆ ಭೀತಿ. ಅವರ ದೊಡ್ಡ ತೈಲ ಚಿತ್ರವನ್ನು ದಿಟ್ಟಿಸಲು ಭಯ. ಅವರು ಹಿಡಿದ ಊರುಗೋಲು, ಕೊಡೆ, ಚೀಲಗಳನ್ನು ಮುಟ್ಟಿದಾಗ ಕೈಕಾಲು ಗದಗದ ನಡುಗುತ್ತದೆ. ಅವರ ಚಪ್ಪಲಿ, ಕೋಟು, ಅಂಗಿ, ಕಾಶ್ಮೀರಿ ಶಾಲುಗಳನ್ನು ಕಂಡಾಗ ಅವರಿಲ್ಲೇ ಮನೆಯಲ್ಲಿ ಅಥವಾ ಸ್ನಾನದ ಕೊಟ್ಟಿಗೆಯಲ್ಲಿ ಇದ್ದಾರೆ ಮತ್ತು ಈಗ ಬರುತ್ತಾರೆ ಎಂದು ಅವಳು ಒಮ್ಮೆ ಭಾವಿಸುವುದೂ ಉಂಟು.

ಜೀವಂತವಿದ್ದಾಗ ಅವರು ರೋಹಿಣಿಯನ್ನು ಬಹಳ ಮಮತೆಯಿಂದ ಕಂಡರು. ಹೆಂಡತಿಯ ಮುಂದಾದರೂ ಅವರು ಒಮ್ಮೊಮ್ಮೆ ಏರಿದ ಧ್ವನಿಯಲ್ಲಿ ಮಾತನಾಡಿದ್ದುದುಂಟು. ಮಗಳೊಡನೆ ಹಾಗಲ್ಲ ಹೀಗೆ ಎಂದು ಅನೇಕ ಸಾರೆ ಅವರು ವಾದಿಸುತಿದ್ದರು. ಆದರೆ ಸೊಸೆಯ ಮುಂದೆ ಅವರ ಸಿಟ್ಟು, ಅಸಮಾಧಾನ, ಅವರ ಬುದ್ಧಿ ಎಲ್ಲ ಜಾರಿ ಬೀಳುತಿತ್ತು. ಅವಳ ಮಾತು ಅವರಿಗೆ ವೇದವಾಕ್ಯ. ಅಷ್ಟು ಅವಳ ಮೇಲೆ ಪ್ರೀತಿ, ಗೌರವ ಮತ್ತು ನಂಬಿಗೆ. ಆ ಅಗಾಧ ಪ್ರೇಮವೇ ಈಗ ರೋಹಿಣಿಯ ಜೀವವನ್ನು ಹಿಡಿದು ಹಿಂಡಿದೆ. ಜೀವದಿಂದಿರುವಾಗ ಅವರು ಅರಿಯದ ಸಂಗತಿ ಮರಣ ಹೊಂದಿದ ಮೇಲೆ ಅವರು ಅರಿತರು ಎಂದವಳ ಭೀತಿ. ಅವರ ಮುಂದೆ ತಾನು ಅಪರಾಧಿನಿಯಾದೆ ಎಂದು ಅವಳು ಹಲುಬಲಾರಂಭಿಸಿದಳು.

ಸಾವಿನ ಮನೆಯಲ್ಲಿ ಯಾವಾಗಲೂ ಸಾವಿನ ಮಾತುಗಳೇ. ಬಿಚ್ಚಿದ್ದ ಮುಡಿ, ಕೆದರಿದ ಕೂದಲು ಮನೆತುಂಬ ಕಸ, ಚೆಲ್ಲಿದ ಬಟ್ಟೆ ಬರೆ, ಇವೇ ಎಲ್ಲರ ದೃಷ್ಟಿಗೆ ಬೀಳುತ್ತವೆ. ನರಳುವ ಮಾತುಗಳು. ಅಳುವ ಮೋರೆಗಳು. ಎಲ್ಲರ ನಡೆನುಡಿಯಲ್ಲಿ ಸಾವಿನ ಕಳೆ. ಅವರ ಮುಖಗಳಲ್ಲಿ ಸಾವಿನ ಕಲೆ. ಮನೆಯ ಒಂದೊಂದು ಕಂಭಗಳು ಸಾವಿನ ಸ್ತಂಭಗಳು ! ಅವುಗಳಿಗೆ ಒರಗಿ ಕುಳಿತ ಜನರೂ ಸತ್ತವರ ವಿವರವನ್ನೆ ಹೇಳುವರು. ಸಾವಿನ ಸಂಗತಿಗಳೇ ಅವರ ತಲೆಯಲ್ಲಿ. ಆದರಂತೆ ರೋಹಿಣಿ ಕೂಡಾ

ಸಾವಿನ ಬಗ್ಗೆ ಈಗ ವಿಚಾರ ಮಾಡುತ್ತಿದ್ದಾಳೆ. ಬದುಕಿ ಏನಃಫಲ? ಅತ್ತ ಮೋಹನನ ಅವಸ್ಥೆ ಹಾಗಾಗಿದೆ. ಮೋಹನನ ಭವಿಷ್ಯ ಸುಖಕರ ವಾಗುವ ಚಿಹ್ನೆಗಳಿಲ್ಲ. ಅವನು ಬಹಳ ದಿನ ಬದುಕಿ ಉಳಿಯಲಾರ. ಒಂದು ದಿನ ರೇಲ್ವೆ ಗಾಲಿಗಳು ಅವನ ಕುತ್ತಿಗೆಯನ್ನು ಕೊರೆದೆಸೆಯುವ ಸಂಭವವಿದೆ. ಬದುಕಿ ಉಳಿದರೆ ಎಲ್ಲ ಮನುಷ್ಯರಂತೆ ಇರಲಾರ. ಹುಚ್ಚ ರಾಸ್ಪತ್ರೆಯೋ ಅವನಿಗೆ ಗತಿಯೋ ಏನೋ! ಅಂತಹ ದುರ್ದಿನಗಳನ್ನು ನೋಡಲು ಬದುಕಿಕೊಂಡಿರಬೇಕೇ? ಕಿವಿಗಳು ಅಂತಹ ಕರ್ಣ ಕಠೋರ ಸುದ್ದಿಗಳನ್ನುಕೇಳಬೇಕಾದೀತೇ ಅದಕ್ಕಿಂತ ಕಣ್ಮುಚ್ಚಿಬಿಡುವುದೇ ಯೋಗ್ಯ.

ಹೌದು. ರೋಹಿಣಿ ಮರಣ ಹೊಂದಿದರೆ ಉತ್ತಮನಿಗೆ ದುಃಖವಾಗು ತ್ತದೆ. ಅವನು ಅಳುತ್ತಾನೆ. ಕೆಲದಿವಸ, ತಿಂಗಳು, ವರುಷಗಳ ವರೆಗೆ ಅತ್ತಾನು. ಕಾಲಕ್ರಮೇಣ ರೋಹಿಣಿಯ ಸ್ಮರಣೆ ಆಗಾಗ ಉಂಟಾಗ ಬಹುದು. ಅಷ್ಟೆ. ಬೇರೆ ಹೆಣ್ಣನ್ನು ಮದುವೆಯಾಗಲೂ ಅವನಿಗೆ ಶಕ್ಯವಿದೆ. ವಯಸ್ಸು ಬಹಳವಿಲ್ಲ. ಹೊಸ ಹೆಂಡತಿಯೊಂದಿಗೆ ಅವನು ನೂತನ ಸಂಸಾರ ಹೂಡಬಲ್ಲ. ರೋಹಿಣಿ ಇರಿದ ಗಾಯವನ್ನು ಅವಳು ಗುಣಪಡಿಸದೇ ಇರ ಲಾರಳು. ಮಕ್ಕಳು ನಕ್ಕುನಲಿದು ಅವನ ಹೃದಯದಲ್ಲಿ ಒಲುಮೆಯ ಬುಗ್ಗೆಯನ್ನೇಳಿಸುವುವು. ಅವಳು ಸಾಯುವದರಿಂದಲೇ ಉತ್ತಮನಿಗೆ ಆ ರೀತಿಯ ಸುಖಕ್ಕೆ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ. ಅದರಿಂದ ಮಾವಯ್ಯನವರ ಆತ್ಮಕ್ಕೂ ತೃಪ್ತಿಯಾದೀತು. ರೋಹಿಣಿಯ ತಪ್ಪನ್ನು ಅವರು ಕ್ಷಮಿಸದೇ ಇರಲಾರರು. ಅವಳು ಬಯಸುವುದು ಅದನ್ನೇ. ಈ ಕೃತಕ ಜೀವನದ ಬಗ್ಗೆ ಅವಳಿಗೆ ಬೇಸರಬಂದಿದೆ.

ಆದರೆ ಸಾಯುವುದಾದರೂ ಹೇಗೆ? ಮಾವಯ್ಯನವರು ವಯೋ ವೃದ್ಧರು. ಹೃದಯ ವಿಕಾರದಿಂದ ಮರಣಹೊಂದಿದರು. ಎಲ್ಲ ಒಂದ್ಕೆ ಗಳಿಗೆಯಲ್ಲಿ ಮುಗಿಯಿತು. ನಿಜ. ಆದರೆ, ಅವಳಿನ್ನೂ ಸಣ್ಣವಳು. ಹೃದ್ರೋಗ ಅವಳ ಹೃದಯವನ್ನು ಹಿಂಡಲಾರದು, ತನ್ನಿಂದ ತಾನೇ ಉಸಿರು ಗಾಳಿಯಲ್ಲಿ ಲೀನವಾಗಲಾರದು. ಅದನ್ನು ಅವಳೇ ನಿಲ್ಲಿಸಬೇಕು. ನೀರಿದ್ದಬಾವಿ ಅವಳಿಗೆ ಗತಿ. ಇಲ್ಲದಿದ್ದರೆ ಬಾವಿಗೆ ಹಾಕಿದ ಹಗ್ಗ. ರೋಹಿಣಿ ಈರೀತಿ ವಿಚಾರ ಮಾಡುತ್ತಿದ್ದಾಳೆ. ಅವಳ ಸ್ಥಿತಪ್ರಜ್ಞ ಸ್ಥಿತಿ

ತೀರು ಮೂರಾಗಿದೆ. ಸಾರಾಸಾರ ವಿಚಾರ ಮೀರಿದಪ್ಪಿದೆ. ತಕ್ಕಡಿಯು ತಟ್ಟೆಗಳು ತೂಕತಪ್ಪಿ ಮೇಲೆಕೆಳಗೆ ಜೋತಾಡುತ್ತಿವೆ. ರಾತ್ರಿ ನಿದ್ದೆಯೇ ಹತ್ತುವುದಿಲ್ಲ. ಅರೆನಿದ್ದೆಯದಾಗ ದುಸ್ವಪ್ನಗಳಿಂದ ಏನೇನೋ ಕನವರಿಸುವಳು. ಗಾಢನಿದ್ದೆ ಹತ್ತಬೇಕೆಂದು ಪೇಟೆಯಿಂದ ನಿದ್ದೆಗುಳಿಗೆಗಳನ್ನು ತರಿಸಿ ಮಲಗಿದಾಗ ಒಂದೊಂದನ್ನು ಬಾಯಿಗೆ ಹಾಕಿಕೊಂಡು ನೀರು ಕುಡಿಯುವಳು.

ಪಿತೃಕಾರ್ಯ ನೆರವೇರಿಸಿದ ಮೇಲೆ ಬಂಧು ಬಳಗದವರು ಒಬ್ಬೊಬ್ಬರಾಗಿ ತೊಲಗಲಾರಂಭಿಸಿದರು. ಎಲ್ಲರು ತೆರಳಿದ ಮೇಲೂ ನಾಗವೇಣಿ ತನ್ನ ಮಕ್ಕಳೊಂದಿಗೆ ಒಂದೆರಡು ವಾರ ಉಳಿದಳು. ಕೊನೆಗೆ ಅವಳೂ ಹಾವೇರಿಗೆ ಹೊರಟಳು. ಮನೆಯಲ್ಲಿ ಮೂವರೇ. ಮೂವರೂ ತಂತಮ್ಮ ದುಃಖದಲ್ಲೇ ಮುಳುಗಿದ್ದಾರೆ. ಉತ್ತಮ ಎಂದಿನಂತೆ ಆಫೀಸಿಗೆ ತೆರಳುತ್ತಾನೆ. ಗಂಗಮ್ಮನವರು ಅಡಿಗೆ ಮನೆಯ ಒಂದು ಮೂಲೆ ಹಿಡಿದು ಕುಳಿತು ಬಿಡುವರು. ರೋಹಿಣಿ ಹೆಚ್ಚಾಗಿ ಅಟ್ಟದಮೇಲೆಯೇ. ಮನೆಯಲ್ಲಿ ಯಾರಿದ್ದಾರೆ ಯಾರಿಲ್ಲ ಎಂದು ಗೊತ್ತಾಗುವಂತಿಲ್ಲ. ಎಲ್ಲರೂ ಮೌನ. ಅಗತ್ಯಬಿದ್ದಾಗ ಅಷ್ಟೇ ಮಾತು. ಆ ಮಾತೂ ಮುತ್ತಿನಷ್ಟು ಪ್ರಿಯ. ಒಬ್ಬರನ್ನೊಬ್ಬರು ನೋಡುವ, ಕೇಳುವ ವಾತಾವರಣವೇ ಉಳಿದಿಲ್ಲ. ರೋಹಿಣಿಗೆ ಅದರಿಂದ ಉಸಿರು ಕಟ್ಟಿದಂತಾಗಿದೆ. ಅವಳ ಜೀವ ಪೇಚಾಡುತ್ತಿದೆ. ಈ ಜಗತ್ತಿನಲ್ಲಿ ತಾನು ಇನ್ನು ಬಹಳ ಕಾಲದ ವರೆಗೆ ಉಳಿವ ಲಕ್ಷಣವಿಲ್ಲ ಎಂದು ಅವಳಿಗೆ ಅನ್ನಿಸಹತ್ತಿದೆ. ಅದು ನಿಶ್ಚಿತ. ಯಾವಾಗ, ಹೇಗೆ ಎಂಬ ಮಾತ್ರ ಅವಳು ಅರಿತಿಲ್ಲ. ಅಗಲಿ ಹೋಗುವ ಮೊದಲು ಒಮ್ಮೆ ಚಂದ್ರಮೋಹನನ ದರ್ಶನ ತೆಗೆದುಕೊಳ್ಳಲು ಅವಳ ಆಶೆ.

ಮನಸ್ಸು ಅತ್ಯಂತ ಅಲ್ಲೋಲ ಕಲ್ಲೋಲದಿಂದಿದ್ದ ಒಂದು ದಿನ ಸಂಜೆ ರೋಹಿಣಿ ಸಾಧನಕೇರಿಗೆ ಬಂದಳು. ತವರು ಮನೆಯಲ್ಲಿ ಸ್ವಲ್ಪ ಹೊತ್ತು ಕಳೆದಳು. ನೆರಮನೆಗಳಿಗೆ ತೆರಳಿ ಗುರುತುಪರಿಚಯದವರ ಸುಖದುಃಖ ಕೇಳಿಕೊಂಡಳು. ಅಲ್ಲೆಲ್ಲ ಮಾತುಮುಗಿಸಿ ಚಂದ್ರಮೋಹನನ ಮನೆಗೆ ಬಂದಾಗ ಸ್ವಲ್ಪ ನಸುಕತ್ತಲೆಯೇ ಆಯಿತು. ಮನೆಯಲ್ಲಿ ಚಂದ್ರಮೋಹನ

ನೊಬ್ಬನೇ. ಅವನ ಅತ್ತಿಗೆ ಮಕ್ಕಳುಮರಿಗಳನ್ನೆಲ್ಲ ಕಟ್ಟಿಕೊಂಡು ಗುಡಿಗೆ ತೆರಳಿದ್ದರು. ರೋಹಿಣಿ ಬಂದುದನ್ನುಕಂಡು ಮೋಹನನಿಗೇ ಆಶ್ಚರ್ಯ ಅನೇಕ ವಾರಗಳಿಂದ ಅವನು ಅವಳನ್ನು ಕಂಡಿರಲಿಲ್ಲ. ಅವಳೂ ಅವನನ್ನು ಕಂಡೊಡನೆ ದುಃಖವನ್ನು ಸಹಿಸಿಕೊಳ್ಳಲಾರದೆ ಬಿಕ್ಕಿಬಿಕ್ಕಿ ಅಳತೊಡಗಿದಳು. ಮೋಹನ ಅವಳ ಸಮೀಪ ಬಂದು ತಲೆಯನ್ನು ಸವರಿ, "ರೋಹಿಣೀ, ಸೈರಿಸಿಕೋ. ಸೈರಿಸಿಕೋ'' ಎಂದು ಸಮಾಧಾಯಿಸಲೆತ್ನಿಸಿದ. ಆದರೆ ಮುಂದೆ ಅವನಿಗೆ ಮಾತನಾಡಲಾಗಲಿಲ್ಲ. ರೋಹಿಣಿ ಅವನ ಪಾದಗಳ ಮೇಲೆ ಬಿದ್ದು ತನ್ನ ಮೋರೆಯಿಂದ ಧೂಳನ್ನು ಒರಸಿದಳು. ಕಣ್ಣೀರಿನಿಂದಲೂ ಅವುಗಳನ್ನು ತೊಯ್ದಳು. ಮೋಹನನ ಕಣ್ಣುಗಳಲ್ಲಿ ಬಿಸಿನೀರಿನ ಬುಗ್ಗೆಗಳು ಒಡೆದುವು.

ರೋಹಿಣಿ ಬಹಳ ಹೊತ್ತು ಅಲ್ಲಿ ನಿಲ್ಲಲಿಲ್ಲ. ನಿಲ್ಲಲು ಅವಳಿಗೆ ಅಶಕ್ಯವಾಗಿದೆ. ನಿಂತರೆ ಅವಳಿಗೆ ಅಸಹನೆ. ಕುಳಿತರೆ ಅಸಹನೆ. ಅವಳ ಜೀವವನ್ನು ಬೇರೆ ಕಡೆ ಯಾರೋ ಹಿಡಿದೆಳೆಯುತಿದ್ದಾರೆ. ಅವಳು ಅವಸರ ದಿಂದ ಹೊರಟಿದ್ದಾಳೆ. ಮೋಹನ ಬಾಗಿಲಿನ ಬಳಿ ನಿಂತು, ''ರೋಹಿಣೀ ಒಬ್ಬಳೇ ಹೋಗುತ್ತೀಯಾ ? " ಎಂದು ಕೇಳಿದ.

'' ಹುಂ. ಒಬ್ಬಳೇ ಮೋಹನ್. ಒಬ್ಬಳೇ ಬಂದಿದ್ದೇನೆ. ಒಬ್ಬಳೇ ತೆರಳುತ್ತೇನೆ "

'' ನಾನೂ ಬರುತ್ತೇನೆ ರೋಹಿಣೀ. ನಿಲ್ಲು ನಿಲ್ಲು. "

'' ನಾನು ಮನೆ ಊರು ಬಿಟ್ಟು ತೆರಳುತಿದ್ದೇನೆ ಮೋಹನ್. ಬಂಧನ ದಾಚೆ ತೆರಳುತಿದ್ದೇನೆ. "

''ರೋಹಿಣೀ, ರೋಹಿಣೀ, ರೋಹಿಣೀ" ಎಂದು ಮೋಹನ ಕೂಗುತ್ತ ಬಂದ. ಕತ್ತಲೆಯಲ್ಲಿ ಅವಳು ಮರೆಯಾಗಿ ಹೋದಳು. ಅವಳು ಮನೆಗೆ ಸಮೀಪಿಸುವ ವರೆಗೂ ''ರೋಹಿಣಿ ರೋಹಿಣಿ" ಎಂದು ಯಾರೋಕರೆದಂತೆ ಅವಳಿಗೆ ಕೇಳಿಸುತಿತ್ತು. ಮನೆಗೆ ಬಂದ ಮೇಲೆ ಅದು ಮಾವಯ್ಯನವರ ಸ್ವರವೆಂದೇ ಅವಳಿಗೆ ಕೇಳಿಸತೊಡಗಿತು.

ಮನೆಗೆ ಉತ್ತಮ ಇನ್ನೂ ಬಂದಿರಲಿಲ್ಲ. ಅತ್ತೆ ಎದುರಿಗಿರಲಿಲ್ಲ. ಬಾಗಿಲನ್ನು ಅವಳೇ ದೂಡಿ ಒಳಗೆ ಬಂದಳು. "ಯಾರದು? ರೋಹಿಣಿ

ಯೇನು?" ಎಂದು ಒಳಗಿನಿಂದ ಗಂಗಮ್ಮನ ಪ್ರೇತಸ್ವರ ಕೇಳಿತು. "ಹುಂ" ಎಂದು ಅವಳ ಬಾಯಿಂದ ಹೊರಟಿತು. ಅವಳ ಕೈಕಾಲುಗಳು ನಡುಗುತ್ತಿದ್ದುವು. ಮಗುವಿನಂತೆ ಕೈಕಾಲುಗಳನ್ನು ಉಪಯೋಗಿಸಿ ಅಟ್ಟವನ್ನೇರಿದಳು. ಹಾಸಿಗೆಯ ಬುಡದಲ್ಲಿಟ್ಟುಕೊಂಡಿದ್ದ ನಿದ್ದೆ ಗುಳಿಗೆ ಬಾಟಲಿಯನ್ನು ನೆಲಕ್ಕೆ ಬಡಿದು ಕೈಗೆ ಸಿಕ್ಕಿದುದನ್ನು, ಕೈಗೆ ಸಿಕ್ಕಿದಷ್ಟು ಬಾಯಿಗೆ ತುರುಕಿಸಿಕೊಂಡಳು. ಕಚ ಕಚ ಜಗಿದು ನುಂಗಿದಳು. ನಾಲಿಗೆಯಿಂದ ರಕುತವೂ ಸುರಿಯ ತೊಡಗಿತು. ಕಣ್ಣು ಕತ್ತಲೆ ಬಂದು ಅವಳು ನೆಲದ ಮೇಲೆ ಬಿದ್ದಳು.

ಆಫೀಸು ಬಿಟ್ಟ ಮೇಲೆ ಗಾಳಿ ಸವಾರಿ ಮುಗಿಸಿಕೊಂಡು ಉತ್ತಮ ಮನೆಗೆ ಮರಳಿದ. ಯಾವಾಗಲೂ ರೋಹಿಣಿ ಇದಿರು ಬಂದು ಅವನನ್ನು ಮಾತನಾಡಿಸುತಿದ್ದಳು. ಇಂದು ಅವಳ ಸುಳಿವಿಲ್ಲ. ಫಕ್ಕನೇ ಉತ್ತಮನ ಮನಸ್ಸಿಗೆ ಚೂರಿಯಿಂದ ಇರಿದಂತಾಯಿತು. "ರೋಹಿಣೀ, ರೋಹಿಣೀ" ಎಂದು ಕರೆದ. ಉತ್ತರವೇ ದೊರೆಯಲಿಲ್ಲ. "ಅಟ್ಟದಲ್ಲಿರಬೇಕು" ಎಂದು ಒಳಗಿನಿಂದ ಗಂಗಮ್ಮ ನುಡಿದರು. "ರೋಹಿಣೀ, ರೋಹಿಣೀ" ಎಂದು ಕರೆಯುತ್ತ ಉತ್ತಮ ಅಟ್ಟಕ್ಕೆ ಬಂದ. ಬಂದವನು ಸಿಡಿಲು ಬಡಿದವನಂತೆ ಅರೆಕ್ಷಣ ಸ್ತಂಭೀಭೂತನಾದ. ಕೇಳಿದವರ ಎದೆಯೊಡೆಯುವಂತೆ "ರೋಹಿಣೀ" ಎಂದು ಅವನು ಕೂಗಿ ಅವಳನ್ನು ತಬ್ಬಿಕೊಂಡ. ಅವಳ ಬಾಯಿಂದ ಸುರಿಯುತಿದ್ದ ರಕುತವನ್ನು ತನ್ನ ಬಾಯಿಂದ ಒರಸಿದ. "ರೋಹಿಣೀ, ರೋಹಿಣೀ, ರೋಹಿಣೀ, ನಾನು ಬಂದಿದ್ದೇನೆ, ರೋಹಿಣೀ, ನೋಡು, ಮಾತನಾಡು. ನನ್ನ ಯಾವ ತಪ್ಪಿಗೆ ನನಗೆ ಈ ಶಿಕ್ಷೆ ರೋಹಿಣೀ?"

ಅವನ ಕೊನೆಯ ಮಾತು ಅವಳಿಗೆ ಕೇಳಿಸಲಿಲ್ಲ. "ರೋಹಿಣೀ, ರೋಹಿಣೀ" ಎಂಬ ಅವನ ಕೂಗು ಅಷ್ಟ ದಿಕ್ಕುಗಳಲ್ಲಿ ಪ್ರತಿಧ್ವನಿಸಿತು.



ಆರಂಭವಾದುದು :  ೧೫ ಅಗಸ್ಟ ೧೯೪೮

# ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಸಂಪಾದಕರು : **ಎಂ. ಹರಿದಾಸ್‌ರಾವ್**

ಪ್ರತಿ ವರುಷದ ಆಗಸ್ಟ್ ೧೫ ರಿಂದ ವರುಷವು ಆರಂಭವಾಗುತ್ತದೆ. ಮೂರು ತಿಂಗಳಿಗೊಂದರಂತೆ ಒಟ್ಟು ನಾಲ್ಕು ಗ್ರಂಥಗಳನ್ನು ವರುಷಕ್ಕೆ ಕೊಡುವೆವು.

ಈ ಸಾಹಿತ್ಯ ಮಾಲೆಯಲ್ಲಿ ಕತೆ, ಕಾದಂಬರಿ, ಏಕಾಂಕ ನಾಟಕ ಮೊದಲಾದ ಸರಸ ಸಾಹಿತ್ಯ ಮಾತ್ರವಲ್ಲ. ದೇಶ ವಿದೇಶಗಳ ರಾಜಕಾರಣ, ಹಾಗೂ ಪಾಶ್ಚಾತ್ಯ ಪೌರ್ವಾತ್ಯ ತತ್ವಜ್ಞಾನಗಳ ಗ್ರಂಥಗಳನ್ನೂ ಕೊಡಲು ಯತ್ನಿಸುವೆವು.

ವರುಷದ ಯಾವುದೇ ಸಮಯದಲ್ಲಿ ಗ್ರಂಥಮಾಲೆಯ ಚಂದಾದಾರರಾಗಬಹುದು. ಅವರಿಗೆ ಆ ವರುಷಾರಂಭದಿಂದ ಪ್ರಕಟಿಸಿದ ಉಳಿದೆಲ್ಲ ಪುಸ್ತಕಗಳನ್ನು ಕಳಿಸಲಾಗುವುದು.

ಚಂದಾದಾರರಿಗೆ ಹಿಂದಿನ ವರುಷಗಳ ಯಾವುದೇ ಗ್ರಂಥ ಬೇಕಾದಲ್ಲಿ ನಮಗೆ ಪತ್ರ ಬರೆದು ತಿಳಿಸಬೇಕು. ಮತ್ತು ಅವರಿಗೆ ಸವಲತ್ತು ಕೊಡಲಾಗುವುದು.

**ವಾರ್ಷಿಕ ಚಂದಾ ರೂ. ೫** (ಅಂಚೆ ವೆಚ್ಚಕೂಡಿ)

*Sarvodaya SahityaMala, Hubli*

# ಪ್ರಕಟವಾದ ಗ್ರಂಥಗಳು

೧) **ಕ್ರಿಸ್ಮಸ್ ಕಾಣಿಕೆ ಮತ್ತು ಇತರ ಕತೆಗಳು** ಬೆಲೆ: ೧—೦—೦
ಓಹೆನ್ರಿ, ವೆಲ್ಸ್, ಪ್ರೋಯೆ ಮೊದಲಾದ ಜಗತ್ತಿನ ವಿವಿಧ ರಾಷ್ಟ್ರಗಳ ಲೇಖಕರ ೧೫ ಚಿಕ್ಕ ಕಥೆಗಳು. ಉತ್ತಮ ಮತ್ತು ಆದರ್ಶ ಕತೆಗಳು.

೨) **ಬದುಕಿನದಾರಿ** ( ಕಾದಂಬರಿ ) ಬೆಲೆ: ೧—೮—೦
ಹುಬ್ಬಳ್ಳಿಯ ಒಂದು ದೇಸಾಯೀ ಕುಟುಂಬದ ಕಥೆ. ಸುಂದರ ಕಾದಂಬರಿ. ಉತ್ತರ ಕರ್ನಾಟಕದ ಜನಜೀವನದ ಒಂದು ಮಾದರಿ.

೩) **ಮರುಭೂಮಿಯ ಅರಬರು** (ರಾಜಕಾರಣ) ಬೆಲೆ: ೧—೮—೦
ಎಲ್ಲ ಅರಬ ರಾಷ್ಟ್ರಗಳ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾಲೋಚಿತ ಕೃತಿ. ವ್ಯಂಗ್ಯ ಚಿತ್ರಗಳು ಮತ್ತು ನಕ್ಷೆಗಳಿಂದ ತುಂಬಿದೆ. ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತ.

೪) **ನಂದಾದೀಪದ ನಂದಿನಿ** ( ಚರಿತ್ರೆ ) ಬೆಲೆ: ೧—೪—೦
ಶ್ರೀಮತಿ ವಿಜಯಲಕ್ಷ್ಮಿ ಪಂಡಿತರ ಜೀವನ ಚರಿತ್ರೆ. ಇದರಲ್ಲಿ ಕಾಂ. ಇತಿಹಾಸ, ನೆಹರೂ ಮನೆತನದ ವಿವರ ಮೊದಲಾದವುಗಳು ಇವೆ.

೫) **ಅವರು ಯುದ್ಧಕ್ಕೆ ಹೋಗಲಿಲ್ಲ** ಬೆಲೆ: ೧—೦—೦
ದಕ್ಷಿಣ ಕನ್ನಡ ಜಿಲ್ಲೆಯ ಜನಜೀವನಕ್ಕೆ ಸಂಬಂಧಿಸಿದ ಕಥೆಗಳು.

೬) **ಬಾಳಿನ ಗಿಡ** ( ಕಾದಂಬರಿ ) ಬೆಲೆ: ೨—೧೨—೦
ನಿವೃತ್ತ ಶಾಲಾ ಉಪಾಧ್ಯಾಯರು ಪಡಭೂಮಿಗೆ ತೆರಳಿ ಅದನ್ನು ಕೃಷಿ ಮಾಡಿದ ಸರಸ ಕಾದಂಬರಿ. ರಾಷ್ಟ್ರ ಕವಿ ಶ್ರೀ ಗೋವಿಂದ ಪೈಗಳವರ ವಿದ್ವತ್ಪೂರ್ಣ ಮುನ್ನುಡಿ. ಅತ್ಯಂತ ಮನೋಹರವಾದ ಕಾದಂಬರಿ.

೭) **ರಾಧಸ್** (ಕಲಾಸಂಕಲನ ) ಬೆಲೆ: ೧—೦—೦
ಶ್ರೀ ಪಾಂಡೇಶ್ವರ ಗಣಪತಿರಾಯರ ವಿದ್ವತ್ಪೂರ್ಣ ಪ್ರಬಂಧಗಳು.

೮) **ವಾಸನಾ** ( ನೀಳ್ಗತೆ ) ಬೆಲೆ: ೧—೦—೦
ಬಂಗಾಲಿ ಬರಹಗಾರರ ಕತೆಯನ್ನು ಆಧರಿಸಿ ಶ್ರೀ ಪಿ.ವಿ. ಆಚಾರ್ಯರು ಬರೆದ ಮನೋವಿಶ್ಲೇಷಣಾತ್ಮಕ ನೀಳ್ಗತೆ.

## ಗ್ರಂಥಮಾಲೆಗೆ ಉದಾರ ಸಹಾಯ ನೀಡಿದವರು

**ಆಜೀವ ಸದಸ್ಯರು :** ( ನೂರು ರೂ. ಗಳನ್ನು ಕೊಟ್ಟವರು )

(೧) H. H. ಉರವಕೊಂಡದ ಜಗದ್ಗುರುಗಳವರು.

(೨) ಶ್ರೀ ಮೋಹರಿ ಹಣಮಂತರಾಯರು, ಹುಬ್ಬಳ್ಳಿ

(೩) ಶ್ರೀ ಬಿ. ಮಾಧವರಾಯರು ಅನಂತಪುರ

(೪) ಕುಂ. ಸೌ. ಬಿ. ಸುಂದರಮ್ಮನವರು ಅನಂತಪುರ

**ಹಿತಚಿಂತಕರು :** ( ರೂ. ೨೫ ಕೊಟ್ಟವರು )

(೧) ಶ್ರೀ ಜಿ. ಎಸ್. ದೇಸಾಯರು ಮುಧೋಳ

(೨) ,, ಟಿ. ವಾಯ್. ಮಿಸ್ಕಿನ್ ಸಾಹುಕಾರು ಗದಗ

(೩) ,, ಬಿ. ಕೆ. ವೆಂಕಟಸುಬ್ಬರಾಯರು ಮಂಗಳೂರು

(೪) ,, ಎಸ್. ಆರ್. ಪ್ರಭುಗಳು ಮಂಗಳೂರು

(೫) ,, ಡಾ. ಬಿ. ನರಸಿಂಗರಾಯರು ಆದವಾನಿ

(೬) ,, ಅ. ಸೀತಾರಾಮ ಭಟ್ಟರು ಹುಬ್ಬಳ್ಳಿ